೭೬ನೇ
ಅಖಿಲ ಭಾರತ ಕನ್ನಡ ಸಾಹಿತ್ಯ
ಸಮ್ಮೇಳನ, ಗದಗ



# ಹೊಸಗನ್ನಡ ವ್ಯಾಕರಣ

ವಿದ್ವಾನ್ ಎನ್. ರಂಗನಾಥ ಶರ್ಮ



ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ
ಬೆಂಗಳೂರು- ೫೬೦೦೧೮

೭೬ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ, ಗದಗ

# ಹೊಸಗನ್ನಡ ವ್ಯಾಕರಣ

ವಿದ್ವಾನ್ ಎನ್. ರಂಗನಾಥ ಶರ್ಮ



ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ
ಬೆಂಗಳೂರು- ೫೬೦೦೧೮

**HOSAGANNADA VYAKARANA** - A Grammar on the modern kannada
by : **Vidwan N. Ranganath Sharma**
Published by : **Kannada Sahitya Parishat**
Pampa Mahakavi Road, Chamarajapet, Bangalore - 560018
Pages : 126 + x     Price : Rs.50=00 ;   **2010**

ಮುದ್ರಣದ ವರ್ಷ : ೨೦೧೦
ಪ್ರತಿಗಳು : ೧೦೦೦
ಬೆಲೆ : ಐವತ್ತು ರೂಪಾಯಿಗಳು


**ಪ್ರಕಟಣಾ ಸಮಿತಿ**

ಅಧ್ಯಕ್ಷರು – ಡಾ. ನಲ್ಲೂರು ಪ್ರಸಾದ್. ಆರ್.ಕೆ.
ಸಂಚಾಲಕರು – ಶ್ರೀ ಎಚ್.ಕೆ. ಮಳಲಿಗೌಡ

ಸದಸ್ಯರು
ಶ್ರೀ ಟಿ.ಎಸ್.ದಕ್ಷಿಣಾಮೂರ್ತಿ
ಡಾ. ಗಿರಡ್ಡಿ ಗೋವಿಂದರಾಜ
ಪ್ರೊ. ಎಸ್.ಜಿ.ಸಿದ್ಧರಾಮಯ್ಯ
ಶ್ರೀ ಬಿ.ಆರ್.ಪೊಲೀಸ್ ಪಾಟೀಲ
ಶ್ರೀ ಮಾನಸ
ಶ್ರೀ ಪ್ರದೀಪ್‌ಕುಮಾರ ಕಲ್ಕೂರ
ಶ್ರೀ ಮುಂಡಲೀಕ ಹಾಲಂಬಿ
ಡಾ. ಎಚ್. ಜಯಮ್ಮ ಕರಿಯಣ್ಣ
ಶ್ರೀ ಕುಂ.ವೀರಭದ್ರಪ್ಪ
ಶ್ರೀ ವಿಷ್ಣು ನಾಯ್ಕ
ಡಾ. ಬೈರಮಂಗಲ ರಾಮೇಗೌಡ

ಸಮ್ಮೇಳನಾಧ್ಯಕ್ಷರು – ಡಾ. ಎಲ್. ಬಸವರಾಜು
೭೫ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ

ನಿರ್ದೇಶಕರು – ಶ್ರೀ ಮನು ಬಳಿಗಾರ್
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

ಮುಖಪುಟ ವಿನ್ಯಾಸ . ಶ್ರೀ ಶಿವು ಎ. ಹೂಗಾರ

ಮುದ್ರಣ : ಬಿ.ಎಂ.ಶ್ರೀ ಅಚ್ಚುಕೂಟ ಆಫ್‌ಸೆಟ್ ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು – ೧೮

# ಅಧ್ಯಕ್ಷರ ನುಡಿ

ಕನ್ನಡ ಸಾಹಿತ್ಯ ಪರಿಷತ್ತಿನಿಂದ ಮರುಮುದ್ರಣಗೊಳ್ಳುತ್ತಿರುವ ಮತ್ತು ಹೊಸದಾಗಿ ಮುದ್ರಿತವಾಗುತ್ತಿರುವ ವಿವಿಧ ಪ್ರಕಾರಗಳ ಪುಸ್ತಕಗಳನ್ನು ಸಹೃದಯರು ಮೆಚ್ಚಿ ಸ್ವೀಕರಿಸಲು ಯೋಗ್ಯವಾಗುವಂತೆ ಆಕರ್ಷಕ ವಿನ್ಯಾಸಗಳಲ್ಲಿ ಸಿದ್ಧಪಡಿಸಿದ ಮೇಲೆ ಅವುಗಳ ಮಾರಾಟದ ಪ್ರಮಾಣ ಹೆಚ್ಚುತ್ತಿರುವುದನ್ನು ಕಂಡು ನನಗೆ ಮಹದಾನಂದವಾಗಿದೆ. ಓದುಗರು ಬಯಸುವ ಪುಸ್ತಕಗಳನ್ನು ಅವರ ಕೈಗೆ ತಲುಪುವಂತೆ ಮಾಡುವುದೇ ಪುಸ್ತಕೋದ್ಯಮದ ಪ್ರಾಥಮಿಕ ಆಶಯ. ಈ ಉದ್ಯಮವನ್ನು ಅತ್ಯಂತ ಗಂಭೀರವಾಗಿ ಪರಿಗಣಿಸಿ, ಕಾಲಕಾಲಕ್ಕೆ ಬದಲಾಗುತ್ತಿರುವ ಓದುಗರ ಅಭಿರುಚಿಗೆ ಸ್ಪಂದಿಸುತ್ತ, ಆ ಕ್ಷೇತ್ರದಲ್ಲಿ ಬಹು ವೇಗವಾಗಿ ಸಾಗುತ್ತಿರುವ ಪ್ರಕಾಶಕರ ನಡುವೆ ಕನ್ನಡ ಸರಸ್ವತಿಯ ಆರಾಧನೆ ಮಾಡುತ್ತಿದ್ದೇನೆಂದು ಭಾವಿಸಿ ಕನ್ನಡ ಸಾಹಿತ್ಯ ಪರಿಷತ್ತು ತಣ್ಣಗೆ, ನಿರುಮ್ಮಳವಾಗಿ ಇರುವ ಕಾಲ ಮುಗಿದುಹೋಯಿತು. ಹೊಸಕಾಲದ ಅಗತ್ಯಕ್ಕೆ ಅನುಗುಣವಾಗಿ ಬದಲಾಗುವುದರಲ್ಲೇ ಸಾಹಿತ್ಯ ಪರಿಷತ್ತಿನ ಜೀವಂತಿಕೆಯಿದೆಯೆಂದು ಬಲವಾಗಿ ನಂಬಿ ನಡೆಯುತ್ತಿರುವವನು ನಾನು. ಕನ್ನಡದಲ್ಲಿ ಇತ್ತೀಚೆಗೆ ಬರುತ್ತಿರುವ ವೈವಿಧ್ಯಮಯ ಪುಸ್ತಕಗಳನ್ನು ನೋಡಿದರೆ ಮೊದಲು ಅವುಗಳನ್ನು ಕಣ್ಣಿಗೊತ್ತಿಕೊಂಡು, ಮೃದುವಾಗಿ ಮೈದಡವಿ, ಸ್ವಲ್ಪ ಹತ್ತಿರದಿಂದಲೂ ನಂತರ ದೂರದಿಂದಲೂ ನೋಡಿ ಪುಳಕಗೊಂಡು ಪುಟ ತಿರುವಬೇಕೆನ್ನಿಸುತ್ತದೆ. ಪಂಚೇಂದ್ರಿಯಗಳಲ್ಲಿ ನಾಲಗೆಯೊಂದನ್ನು ಹೊರತುಪಡಿಸಿ ಉಳಿದವುಗಳೆಲ್ಲ ತಣಿಯದ ದಿವ್ಯಸುಖವನ್ನು ಖಂಡಿತ ಅನುಭವಿಸುತ್ತವೆ. ಪುಸ್ತಕಪ್ರೇಮಿಗಳು ಯಾರೂ ಈ ಭವಸುಖನಿಮಜ್ಜನದಿಂದ ಬಿಡಿಸಿಕೊಳ್ಳಲಾರರು.

ಲೇಖಕ–ಮಾರಾಟಗಾರ–ಓದುಗರಿಗೆ ವಿಭಿನ್ನ ರೀತಿಯ ಸುಖವುಣ್ಣಿಸುವ ಪೈಪೋಟಿಯಲ್ಲಿ ಪುಸ್ತಕೋದ್ಯಮ ಮುಳುಗಿಹೋಗಿರುವಾಗ ಪರಿಷತ್ತು ತಟಸ್ಥ ತಲ್ಲೀನತೆಯಲ್ಲಿರುವುದು ಸಾಧ್ಯವೇ ಇಲ್ಲ. ಗತವೈಭವದ ಸಾಕ್ಷಿಯಾಗಿ ಉಳಿದಿರುವ, ಆದರೆ ಇವತ್ತಿನ ಅಭಿರುಚಿಗೆ ಸಲ್ಲದಂಥ ಮುಖಪುಟ, ವರ್ಣಸಂಯೋಜನೆ, ಚಿತ್ರ ವಿನ್ಯಾಸ, ಒಳಗಿನ ಕಾಗದಗಳನ್ನು ಸಂಪೂರ್ಣ ಬದಲಾಯಿಸಿ ಚಂದಗಾಣಿಸಿದರೆ ಮಾತ್ರ ಓದುಗರು ಹತ್ತಿರ ಬರುತ್ತಾರೆ, ಕೈಯಿಂದ ಎತ್ತಿ ನೋಡುತ್ತಾರೆ, ಕೊಳ್ಳುವ ಮನಸ್ಸು ಮಾಡುತ್ತಾರೆ, ಮನೆಯ ಕಪಾಟುಗಳನ್ನು ಪುಸ್ತಕಗಳಿಂದ ಅಲಂಕರಿಸುತ್ತಾರೆ. ಪುಸ್ತಕವೊಂದರ ಪುಟ ಪುಟಗಳಲ್ಲಿ ಪ್ರತಿಭೆ–ಪಾಂಡಿತ್ಯಗಳ ವಿದ್ಯುತ್ ಪ್ರವಾಹ ಹರಿದು ಓದುಗರನ್ನು ರಸರೋಮಾಂಚನಗೊಳಿಸುವುದು ಎಷ್ಟು ಮುಖ್ಯವೋ ನಮಗೆ ಬೇಕಾದ್ದು ಅದರಲ್ಲೇನೋ ಇದೆ ಎನ್ನುವ ಸೂಚನೆ ಪುಸ್ತಕದತ್ತ ನೋಟ ಹಾಯಿಸುತ್ತಿದ್ದಂತೆ ಸಿಗುವುದೂ ಅಷ್ಟೇ ಮುಖ್ಯ. ಆಧುನಿಕ ಮುದ್ರಣ ತಂತ್ರಜ್ಞಾನದ ಸಾಧ್ಯತೆಗಳನ್ನು ಸಮರ್ಪಕವಾಗಿ ಅಳವಡಿಸಿಕೊಳ್ಳುವುದರಿಂದಲೂ ಯಶಸ್ಸಿನ ಹೆದ್ದಾರಿ ನಿರ್ಮಾಣವಾಗುತ್ತದೆಂಬ ಮಾತೂ ಸತ್ಯವೇ. ಇಷ್ಟೆಲ್ಲಾ ಚಿಂತನ–ಮಂಥನ, ಪರೀಕ್ಷೆ–ಪ್ರಯೋಗ, ಅವಲೋಕನ–ಪರಾಮರ್ಶನಗಳ ಪರಿಣಾಮವಾಗಿಯೇ ವರ್ತಮಾನದ

ಪುಸ್ತಕ ಪ್ರಕಟಣೆಯ ತುರುಸಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಆತ್ಮವಿಶ್ವಾಸದ ಮತ್ತು ಹೆಮ್ಮೆಯ ಹೆಜ್ಜೆಗಳನ್ನು ಇಡಲು ಸಾಧ್ಯವಾಗಿದೆ. ಬೆಂಗಳೂರು ಮತ್ತು ಹೊರಗೆ ನಡೆಯುತ್ತಿರುವ ಪುಸ್ತಕ ಮೇಳ-ಪುಸ್ತಕ ಪ್ರದರ್ಶನಗಳಲ್ಲಿ ಜಯಭೇರಿ ಬಾರಿಸಲು ಸಾಧ್ಯವಾಗಿದೆ. ೨೦೦೯ರ ಕನ್ನಡ ರಾಜ್ಯೋತ್ಸವದ ನೆನಪಿಗೆ ಏರ್ಪಡಿಸಿದ್ದ ಪುಸ್ತಕ ಪ್ರದರ್ಶನ ಮತ್ತು ಮಾರಾಟದಲ್ಲಿ ದಾಖಲೆಯ ವಹಿವಾಟು ನಡೆಸಲು ಸಾಧ್ಯವಾಗಿದೆ. ಕನ್ನಡ ಸಾಹಿತ್ಯ ಪರಿಷತ್ತಿನ ಜಿಲ್ಲಾ ಮತ್ತು ತಾಲ್ಲೂಕು ಘಟಕಗಳು ಸಮ್ಮೇಳನಗಳ ಸಂದರ್ಭದಲ್ಲಿ ಭರವಸೆಯಿಂದ ಪುಸ್ತಕಗಳನ್ನು ಹೊರತರಲು ಸಾಧ್ಯವಾಗಿದೆ. ಇದನ್ನೆಲ್ಲ ಸಾಧ್ಯವಾಗಿಸುವುದಕ್ಕೆ ಕಾರಣರಾದ ಕನ್ನಡ ಪುಸ್ತಕಪ್ರೇಮಿಗಳನ್ನು ಅಭಿನಂದಿಸಬೇಕಾಗಿದೆ.

೨೦೧೦ ಫೆಬ್ರವರಿ ೧೯ ರಿಂದ ೨೧ ರವರೆಗೆ ಮೂರು ದಿನಗಳ ಕಾಲ ಗದಗದಲ್ಲಿ ನಡೆಯಲಿರುವ ೭೬ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ನೆನಪಿಗಾಗಿ ೭೬ ಕೃತಿಗಳನ್ನು ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸುತ್ತಿದೆ. ಕನ್ನಡ ಸಾಹಿತ್ಯದ ಎಲ್ಲ ಪ್ರಕಾರಗಳನ್ನೂ ಒಳಗೊಳ್ಳಲಿರುವ ಈ ಪುಸ್ತಕಗಳ ಆಯ್ಕೆಗೆ ಅವುಗಳ ಗುಣಮಟ್ಟವೇ ಮೂಲ ಬಂಡವಾಳವಾಗಿದೆ. ಪರಿಷತ್ತು ತಮ್ಮ ಒಂದು ಪುಸ್ತಕವನ್ನು ಪ್ರಕಟಿಸಬೇಕೆಂಬ ಅಭಿಲಾಷೆಯನ್ನು ವ್ಯಕ್ತಪಡಿಸಿ ನಾಡಿನ ಮೂಲೆಮೂಲೆಗಳಿಂದ ಲೇಖಕರು ಪತ್ರ ಬರೆದು ವಿನಂತಿ ಮಾಡಿಕೊಳ್ಳುತ್ತಾರೆ. ಅನೇಕರು ಹಸ್ತಪ್ರತಿಗಳನ್ನೇ ಕಳುಹಿಸಿಕೊಡುತ್ತಾರೆ. ಜಿಲ್ಲಾಧ್ಯಕ್ಷರುಗಳ ಮೂಲಕ ಒತ್ತಾಯ ತರುತ್ತಾರೆ. ಅಂಥ ಮನವಿಗಳು ವರ್ಷವೊಂದರಲ್ಲಿ ಸಾವಿರವನ್ನೂ ಮೀರುತ್ತವೆ. ಹಾಗೆ ಎಲ್ಲ ಪುಸ್ತಕಗಳನ್ನೂ ಮರುಮಾತಿಲ್ಲದೆ ಪ್ರಕಟಿಸುವುದು ಪರಿಷತ್ತಿಗೆ ಸಾಧ್ಯವೂ ಇಲ್ಲ, ಅದು ಸಾಧುವೂ ಅಲ್ಲ. ಪುಸ್ತಕದ ಶಕ್ತಿ-ಯೋಗ್ಯತೆಗಳನ್ನು ಜರಡಿಯಾಡಿ ಅಂತಿಮ ನಿರ್ಧಾರವನ್ನು ತೆಗೆದುಕೊಳ್ಳುವ ಪರಿಶೀಲನಾ ಸಮಿತಿಯ ಅಗ್ನಿದಿವ್ಯವನ್ನು ಎದುರಿಸಿಯೇ ಕೃತಿ ಪ್ರಕಟಗೊಳ್ಳಬೇಕಾಗುತ್ತದೆ. ಈ ಬಾರಿಯ ಅಕ್ಷರಜಾತ್ರೆಯನ್ನು ಅರ್ಥಪೂರ್ಣವಾಗಿ ಸಿಂಗರಿಸುವುದಕ್ಕಾಗಿಯೇ ಸಜ್ಜುಗೊಂಡಿರುವ ಈ ಪುಸ್ತಕಗಳು ಪ್ರೀತಿಸುವ ಸಹೃದಯರ ಮಡಿಲನ್ನು ಸೇರಲಿ, ಅವರ ಜ್ಞಾನಭಂಡಾರವನ್ನು ವಿಸ್ತರಿಸಲಿ, ಅವರನ್ನು ರಸಾನಂದದಲ್ಲಿ ಮುಳುಗಿಸಲಿ ಎಂದು ಹಾರೈಸುತ್ತೇನೆ. ಓದುಗರ ರಚನಾತ್ಮಕ ಸಲಹೆ ಮತ್ತು ಪ್ರತಿಕ್ರಿಯೆಗಳಿಗೆ ಸದಾ ಸ್ವಾಗತವಿದೆ.

**ಡಾ. ನಲ್ಲೂರು ಪ್ರಸಾದ್. ಆರ್.ಕೆ.**
**ಅಧ್ಯಕ್ಷರು**

# ನಿವೇದನೆ

ಈಗ ಪ್ರಚಲಿತವಾಗಿರುವ ಕನ್ನಡ ಭಾಷೆಗೆ ಅನುಗುಣವಾದ ವ್ಯಾಕರಣ ಗ್ರಂಥವನ್ನು ರಚಿಸಬೇಕೆಂಬ ಉದ್ದೇಶದಿಂದ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು ಒಂದು ಸಮಿತಿಯನ್ನು ಗೊತ್ತು ಮಾಡಿ ಸಮಾಲೋಚನೆಗಾಗಿ ಕರೆದರು. ಅದರಲ್ಲಿ ಈ ವಿಷಯವನ್ನು ಪರಿಶೀಲಿಸಿ ಒಂದು ವ್ಯಾಕರಣ ಗ್ರಂಥವನ್ನು ರಚಿಸುವುದು ಅವಶ್ಯಕವೆಂದು ನಿರ್ಣಯವಾಯಿತು. ಅದನ್ನು ನಾನು ಬರೆಯಬೇಕೆಂದು ಸಮಿತಿಯು ಅಭಿಪ್ರಾಯಪಟ್ಟಿತು. ನಾನು ಈ ಕಾರ್ಯವನ್ನು ವಹಿಸಿಕೊಳ್ಳಲು ಮೊದಲು ಒಪ್ಪಲಿಲ್ಲ. ಅದಕ್ಕೆ ನನ್ನ ಮನಸ್ಸಿನಲ್ಲಿದ್ದ ಕಾರಣಗಳು ಇವು-

೧. ಈಗ ಕನ್ನಡ ಭಾಷೆ ಬಹುಮುಖವಾಗಿ ಬೆಳೆದಿದೆ. ಶಬ್ದಗಳು ನಾನಾ ರೂಪಾಂತರಗಳನ್ನು ತಳೆದಿವೆ. ವಾಕ್ಯರಚನೆಯಲ್ಲಿ ನೂತನ ಪ್ರಯೋಗಗಳು ಗೋಚರಿಸಿವೆ. ಇವೆಲ್ಲವನ್ನೂ ನಿಯಮಗಳಿಗೆ ಅಳವಡಿಸುವಂತೆ ವ್ಯಾಕರಣವನ್ನು ರಚಿಸುವುದು ಸುಲಭವಲ್ಲ, ನನಗೆ ಅಶಕ್ಯವಾದದ್ದೇ.

೨. ಬರೆಯಬೇಕಾದ ವ್ಯಾಕರಣಕ್ಕೆ ಯಾವ ಗ್ರಂಥವನ್ನು ಪ್ರಮಾಣವೆಂದಿಟ್ಟು ಕೊಳ್ಳಬೇಕು? ಹಳಗನ್ನಡ ವ್ಯಾಕರಣದ ನಿಯಮಗಳಲ್ಲಿ ಬಹುಭಾಗ ಹೊಸಗನ್ನಡಕ್ಕೆ ಅನ್ವಯಿಸುವುದಿಲ್ಲ. ಇರುವ ಕೆಲವು ಹೊಸಗನ್ನಡ ವ್ಯಾಕರಣಗಳು ಶಾಲೆಗಳ ಪಠ್ಯಪುಸ್ತಕದ ದೃಷ್ಟಿಯಿಂದ ಬರೆದವು. ಕೆಲವು ವಿಸ್ತೃತ, ಕೆಲವು ಸಂಕ್ಷಿಪ್ತ, ಕೆಲವು ಭಾಷೆಯ ಏಕದೇಶವನ್ನು ಮಾತ್ರ ಪರಿಶೀಲಿಸತಕ್ಕವು. ಅಂಥ ಇನ್ನೊಂದು ಪುಸ್ತಕವನ್ನು ಬರೆಸುವ ಉದ್ದೇಶ ಪರಿಷತ್ತಿಗೆ ಇರಲಾರದು.

೩. ಕನ್ನಡದಲ್ಲಿ ಹಲವಾರು ಪ್ರಾದೇಶಿಕ ಭೇದಗಳಿವೆ. ಅವೆಲ್ಲವನ್ನೂ ಸಂಗ್ರಹಿಸಿದರೆ ಬೃಹದ್ಗ್ರಂಥವಾದೀತು. ಪ್ರಾದೇಶಿಕ ಪ್ರಯೋಗಗಳು ವ್ಯಾಕರಣ ದೃಷ್ಟಿಯಿಂದ ಸಾಧುವೆನ್ನಬೇಕೆ? ಹಾಗೆನ್ನಲು ಪ್ರಮಾಣಭೂತವಾದ ಶಾಸ್ತ್ರಜ್ಞನು ಯಾರು? ನಾನು ಬರೆಯುವುದು ವಿವಾದಗಳಿಗೆ ಕಾರಣವಾಗಬಹುದು- ಇತ್ಯಾದಿ.

ಆದರೆ ಸಮಾಲೋಚನಾ ಸಮಿತಿಯ ವಿದ್ವನ್ಮಿತ್ರರು ಈ ಪುಸ್ತಕವನ್ನು ನಾನು ಬರೆಯಬೇಕೆಂದು ಆದರದ ಆಗ್ರಹವನ್ನು ತಂದರು. "ಪುಸ್ತಕವು ಜನಸಾಮಾನ್ಯರಿಗೆ ಅನುಕೂಲಿಸುವ ಕೈಪಿಡಿಯಾಗಿದ್ದರೆ ಸಾಕು. ಕನ್ನಡವನ್ನು ಸ್ವಲ್ಪ ಮಟ್ಟಿಗೆ ಬಲ್ಲವರಿಗೆ

ಮಾರ್ಗದರ್ಶನವನ್ನೀಯುವುದು ಉದ್ದೇಶ. ಇದ್ದುದರಲ್ಲಿ ಶುದ್ಧವಾಗಿ ಮಾತಾಡಲೂ ಬರೆಯಲೂ ಅವರಿಗೆ ನೆರವಾಗಬೇಕು. ಹೊಸ ಲೇಖಕರಿಗೆ 'ಯಾವ ಮಾತು ಸರಿ-ಯಾವುದು ತಪ್ಪು' ಎಂಬ ಅರಿವಾಗಬೇಕು. ಪ್ರಾದೇಶಿಕ ಭೇದಗಳನ್ನು ಸಂಗ್ರಹಿಸಬೇಕಾಗಿಲ್ಲ. ಈಗ ಗ್ರಂಥಗಳಲ್ಲಿ ಹೆಚ್ಚಾಗಿ ಬಳಕೆಯಲ್ಲಿರುವ ಕನ್ನಡವನ್ನು ಗಮನದಲ್ಲಿರಿಸಿಕೊಳ್ಳಬಹುದು. ಪರ್ಯಾಯವಾಗಿ ಶಾಲೆಯ ಕನ್ನಡ ವಿದ್ಯಾರ್ಥಿಗಳಿಗೆ ಉಪಯೋಗವಾದರೆ ಒಳ್ಳೆಯದೇ. ಕೂಲಂಕಷವಾದ ವ್ಯಾಕರಣ ವಿಚಾರವೇನೂ ಅಪೇಕ್ಷಣೀಯವಲ್ಲ. ಬರೆಯುವ ವಿಧಾನದಲ್ಲಿ ನೀವು ಸ್ವತಂತ್ರರು" ಎಂದು ತಿಳಿಸಿದರು. ಸಮಿತಿಯವರ ಪ್ರೀತ್ಯಾದರಗಳಿಗೆ ನಾನು ಮಣಿಯಬೇಕಾಯಿತು.

ಮೇಲ್ಕಂಡ ನುಡಿಗಳಿಂದ ಈ ಪುಸ್ತಕದ ಉದ್ದೇಶ, ವ್ಯಾಪ್ತಿ, ಪರಿಮಿತಿಗಳು ಸ್ಪಷ್ಟವಾಗುತ್ತವೆ.

ನಮ್ಮ ಕನ್ನಡ ಬೆಳೆಯಲು ವಿಪುಲವಾಗಿ ಹೊಸ ಶಬ್ದಗಳೂ ಅರ್ಥವತ್ತಾದ ಪ್ರಯೋಗ ವಿಶೇಷಗಳೂ ಬೇಕಾಗಿವೆ. ಬೆಳವಣಿಗೆ ಸಹಜವೂ ಸುಂದರವೂ ಆರೋಗ್ಯಪೂರ್ಣವೂ ಆಗಿರಬೇಕಲ್ಲದೆ, ರೋಗರೂಪವಾದ ವಿಕಾರವಾಗಬಾರದು. ಭಾಷೆಯ ಸೌಂದರ್ಯವನ್ನೂ ಆರೋಗ್ಯವನ್ನೂ ನೋಡಿಕೊಳ್ಳತಕ್ಕದ್ದು ವ್ಯಾಕರಣವಲ್ಲದೆ ಇನ್ನಾವುದು ?

ಹಲವು ಮುಖಗಳಲ್ಲಿ ಬೆಳವಣಿಗೆಯನ್ನೋ ವಿಕಾರವನ್ನೋ ಪಡೆದ ಹೊಸಗನ್ನಡಕ್ಕೆ ಎಲ್ಲರೂ ಒಪ್ಪಬಹುದಾದ ಪ್ರಮಾಣಸೂತ್ರವಿಲ್ಲದಿರುವಾಗ ವ್ಯಾಕರಣವನ್ನು ರಚಿಸುವುದು ಕಠಿಣವೇ. ಸಮಾಲೋಚನಾ ಸಮಿತಿಯು ಸೂಚಿಸಿದಂತೆ ಪ್ರಚುರ ಪ್ರಯೋಗಗಳನ್ನು ಆಧರಿಸಿ ಈ ಪುಸ್ತಕವನ್ನು ರೂಪಿಸಲು ಯತ್ನಿಸಿದ್ದೇನೆ. ಆಡುಮಾತುಗಳನ್ನು ಸ್ವಲ್ಪಮಟ್ಟಿಗೆ ದೂರೀಕರಿಸಿ ಆದಷ್ಟು ವ್ಯಾಕರಣಕ್ಕೆ ಹತ್ತಿರದಲ್ಲಿರುವ ಶಬ್ದಗಳನ್ನು ಸರಿಯೆಂದು ಅಂಗೀಕರಿಸಲಾಗಿದೆ. ನಿಯಮಗಳನ್ನು ಪರಿಮಿತಗೊಳಿಸಿ ಉದಾಹರಣೆಗಳ ಪ್ರದರ್ಶನದಿಂದ ಸಿದ್ಧರೂಪಗಳ ಪರಿಚಯವನ್ನು ಮಾಡಿಸಲು ಉದ್ದೇಶಿಸಿದೆ. ಇದು ಸಾಮಾನ್ಯ ಜನತೆಗಾಗಿ ರೂಪಿಸಿದ ಒಂದು ಕೈಪಿಡಿ. ಆದ್ದರಿಂದಲೇ ಇದರಲ್ಲಿ ಸಮಗ್ರತೆಯನ್ನು ಕಾಣಲು ಯತ್ನಿಸಬಾರದಾಗಿ ವಿಜ್ಞಾಪಿಸುತ್ತೇನೆ. ಏಕೆಂದರೆ, ಈಗ ಪ್ರಚುರಪ್ರಯೋಗದಲ್ಲಿರುವ ಕೆಲವು ಶಬ್ದಗಳ ಮತ್ತು ವಾಕ್ಯಗಳ ಸಾಧುತ್ವವನ್ನು ವ್ಯಾಕರಣದ ದೃಷ್ಟಿಯಿಂದ ಹೇಳುವುದು ಸಮಸ್ಯೆಯಾಗಿದೆ. ಉದಾಹರಣೆಗೆ:

೧. **ಈ ಪುಸ್ತಕದಲ್ಲಿನ ವಿಷಯ**='ಪುಸ್ತಕದಲ್ಲಿ' ಎಂಬ ಸಪ್ತಮ್ಯಂತದ ಮೇಲೆ ಮತ್ತೆ ಷಷ್ಠೀವಿಭಕ್ತಿ ಬಂದದ್ದು ಹೇಗೆ? ಬಂದರೂ 'ಪುಸ್ತಕದಲ್ಲಿ + ಅ = ಪುಸ್ತಕದಲ್ಲಿಯ' ಎಂದಾಗಬೇಕಲ್ಲವೇ?

೨. **ಆದ್ದರಿಂದ, ಆದುದರಿಂದ, ಆದದ್ದರಿಂದ** = ಇವುಗಳಲ್ಲಿ ಯಾವುದು ಸರಿ? ನನ್ನ ಅಭಿಪ್ರಾಯದಲ್ಲಿ 'ಆದುದು + ಅದರಿಂದ' ಎಂಬೆರಡು ಶಬ್ದಗಳು ಇಲ್ಲಿ ಸೇರಿವೆ. 'ಆದುದು' ಎಂಬುದು ಪೂರ್ವವಾಕ್ಯಕ್ಕೆ ಸೇರಿದುದು. 'ಆದುದರಿಂದ' ಎಂದು ಈ ಶಬ್ದಗಳ ಮೂಲರೂಪವಿರಬೇಕು.

೩. **ಬುದ್ಧಿಯಿರುವವನು**= ಈ ಶಬ್ದದ ನಿಷ್ಪತ್ತಿ ಹೇಗೆ? 'ಇರುವವನು' ಮನುಷ್ಯ. 'ಇರುವ ಬುದ್ಧಿ ಯಾರಿಗೋ ಅವನು' ಎಂಬ ಅರ್ಥ ಬರುವುದು ಹೇಗೆ? 'ಬುದ್ಧಿ ಯಾರಲ್ಲಿ ಇರುವುದೋ ಅವನು ಇರುವವನು' ಎಂದು ಅಧಿಕರಣಾರ್ಥದಲ್ಲಿ ಕೃತ್ ಪ್ರತ್ಯಯವನ್ನು ಹೇಳಬೇಕಾಗುತ್ತದೆ. ಹೀಗೆ 'ಕಾಲುಮುರಿದ ಕೋಳಿ' ಮೊದಲಾದ ಶಬ್ದಗಳೂ ಪರಿಶೀಲನೀಯ.

೪. ಸರ್ಕಾರದಿಂದ ಆಜ್ಞೆಯನ್ನು ಹೊರಡಿಸಲಾಗುವುದು= ಇದು ಕರ್ತರಿ ಪ್ರಯೋಗವೆ? ಕರ್ಮಣಿ ಪ್ರಯೋಗವೆ? 'ಸರ್ಕಾರವು ಆಜ್ಞೆಯನ್ನು ಹೊರಡಿಸಿದೆ' ಎಂಬ ವಾಕ್ಯದ ರೂಪಾಂತರವಿದು. ಕರ್ತರಿ ಪ್ರಯೋಗವಾದರೆ 'ಸರ್ಕಾರದಿಂದ' ಎಂಬಲ್ಲಿ ತೃತೀಯಾವಿಭಕ್ತಿ ಹೇಗೆ? ಕರ್ಮಣಿ ಪ್ರಯೋಗವಾದರೆ 'ಆಜ್ಞೆಯನ್ನು' ಎಂಬಲ್ಲಿ ದ್ವಿತೀಯಾ ವಿಭಕ್ತಿ ಹೇಗೆ? ಉಭಯ ಪಕ್ಷಗಳಲ್ಲಿಯೂ ಯಾವುದು 'ಆಯಿತು'?

೫. ನನ್ನ ಅನಾರೋಗ್ಯ ಮತ್ತು ಹಣದ ಅಭಾವದಿಂದ ಗ್ರಂಥದ ಪ್ರಕಟನೆ ನಡೆಯಲಿಲ್ಲ= 'ಇಂದ' ಪ್ರತ್ಯಯಕ್ಕೆ ಅನಾರೋಗ್ಯ ಶಬ್ದದೊಡನೆ ಅನ್ವಯ ಬರುತ್ತದೆಯೆ?

ಶ್ರೀ ಬಿ. ಮಲ್ಲಪ್ಪನವರು ರಚಿಸಿದ 'ಶಬ್ದಾದರ್ಶ' ಎಂಬ ವ್ಯಾಕರಣವು ಕನ್ನಡ ನಾಡಿನಲ್ಲಿ ತುಂಬ ಮನ್ನಣೆಯನ್ನು ಗಳಿಸಿದ ಗ್ರಂಥ. ಅದರಿಂದ ನಾನು ಪಡೆದ ಉಪಕಾರ ಅತಿಶಯವಾದದ್ದು. ಅದರ ಉಪಬೃಂಹಣವೇ ಈ ಪುಸ್ತಕವೆಂದರೂ ಸಲ್ಲುವುದು. ಅಲ್ಲದೆ ಪ್ರೊ|| ಟಿ.ಎನ್. ಶ್ರೀಕಂಠಯ್ಯನವರ ಕನ್ನಡ ಮಧ್ಯಮ ವ್ಯಾಕರಣ, ಪಂಡಿತ ಚೆನ್ನಪ್ಪ ಎರೆಸೀಮೆಯವರ ಕನ್ನಡ ವ್ಯಾಕರಣದರ್ಪಣ- ಇವುಗಳಿಂದಲೂ ನಾನು ನೆರವನ್ನು ಪಡೆದಿದ್ದೇನೆ. ಇವರೆಲ್ಲರಿಗೂ ನಾನು ಋಣಿ.

ಇದು 'ಹೊಸಗನ್ನಡ ವ್ಯಾಕರಣ'ವಾದರೂ ಪ್ರಾಚೀನ ಕಾವ್ಯಗಳನ್ನೋದತಕ್ಕವರಿಗೆ

ನೆರವಾಗಲೆಂದು ಹಳಗನ್ನಡ, ನಡುಗನ್ನಡಗಳಿಗೆ ಸಂಬಂಧಿಸಿದ ಅಂಶಗಳನ್ನು ಅನುಬಂಧಗಳಲ್ಲಿ ಸೇರಿಸಿದ್ದೇನೆ. ಇದಕ್ಕೆ ಕೇಶಿರಾಜನ ಶಬ್ದಮಣಿದರ್ಪಣ, ಭಟ್ಟಾಕಳಂಕನ ಶಬ್ದಾನುಶಾಸನ, ಶ್ರೀ ಬಿ. ಮಲ್ಲಪ್ಪನವರ ಶಬ್ದಾದರ್ಶಗಳಿಂದ ಉಪಕೃತನಾಗಿದ್ದೇನೆ. ಕಡೆಯಲ್ಲಿರುವ 'ಶಬ್ದಶುದ್ಧಿ' ಎಂಬ ಅನುಬಂಧವು ಶಬ್ದಕೋಶದಂತೆ ಉಪಯುಕ್ತವಾದೀತೆಂದು ನನ್ನ ಎಣಿಕೆ.

ಈ ಗ್ರಂಥದಿಂದ ಕನ್ನಡ ಬಾಂಧವರಿಗೆ ಅತ್ಯಲ್ಪ ಪ್ರಯೋಜನವಾದರೂ ಹೊಸಗನ್ನಡವನ್ನು ವ್ಯವಸ್ಥೆಗೊಳಿಸಲು ಸಮಗ್ರವಾದ ಒಂದು ವ್ಯಾಕರಣ ಗ್ರಂಥ ಬೇಕೆಂಬ ಅಭಿಪ್ರಾಯ ವಿದ್ವಾಂಸರಲ್ಲಿ ಮೂಡಿದರೂ ನನ್ನ ಶ್ರಮ ಸಾರ್ಥಕ.

ಬೆಂಗಳೂರು

ಎನ್. ರಂಗನಾಥಶರ್ಮ

# ಪರಿವಿಡಿ

೧. ಅಕ್ಷರ ಪ್ರಕರಣ ೧

೨. ಸಂಧಿ ಪ್ರಕರಣ ೫

೩. ನಾಮಪದ ಪ್ರಕರಣ ೧೬

೪. ಕಾರಕ ಪ್ರಕರಣ ೪೦

೫. ಸ್ತ್ರೀ ಪ್ರತ್ಯಯಗಳು ೫೩

೬. ತದ್ಧಿತಾಂತ ಪ್ರಕರಣ ೫೫

೭. ತದ್ಭವ ಪ್ರಕರಣ ೫೯

೮. ಸಮಾಸ ಪ್ರಕರಣ ೬೬

೯. ಕ್ರಿಯಾಪದ ಪ್ರಕರಣ ೭೯

೧೦. ಕೃದಂತ ಪ್ರಕರಣ ೯೩

೧೧. ಅವ್ಯಯ ಪ್ರಕರಣ ೧೦೨

೧೨. ದ್ವಿರುಕ್ತಿ ಪ್ರಕರಣ ೧೦೩

೧೩. ಪ್ರಯೋಗ ಪ್ರಕರಣ ೧೦೪

೧೪. ಅನುಬಂಧ ಹಳಗನ್ನಡ-೧ ೧೧೧

ನಡುಗನ್ನಡ-೨ ೧೨೧

ಶಬ್ದಶುದ್ಧಿ-೩ ೧೨೪

# ಹೊ ಸ ಗ ನ್ನ ಡ ವ್ಯಾ ಕ ರ ಣ

## ೧. ಅಕ್ಷರ ಪ್ರಕರಣ

### ಅಕ್ಷರಮಾಲೆ

ಹೊಸಗನ್ನಡದಲ್ಲಿ ಕೆಳಗೆ ಬರೆದಿರುವ ಅಕ್ಷರ ಮಾಲೆ ಬಳಕೆಯಲ್ಲಿದೆ. ಇದಕ್ಕೆ ವರ್ಣಮಾಲೆಯೆಂದೂ ಹೆಸರಿದೆ.

### ಸ್ವರ

ಅ ಆ ಇ ಈ ಉ ಊ ಋ ೠ ಎ ಏ ಐ ಒ ಓ ಔ

(ಅ)ಂ (ಅ)ಃ

### ವ್ಯಂಜನ

#### ೧. ವರ್ಗೀಯ

ಕವರ್ಗ - ಕ ಖ ಗ ಘ ಙ

ಚವರ್ಗ - ಚ ಛ ಜ ಝ ಞ

ಟವರ್ಗ - ಟ ಠ ಡ ಢ ಣ

ತವರ್ಗ - ತ ಥ ದ ಧ ನ

ಪವರ್ಗ- ಪ ಫ ಬ ಭ ಮ

#### ೨. ಅವರ್ಗೀಯ

ಯ ರ ಲ ವ ಶ ಷ ಸ ಹ ಳ

ಈ ಅಕ್ಷರಗಳಿಗೆ 'ಕಾರ' ಎಂಬ ಪ್ರತ್ಯಯವನ್ನು ಸೇರಿಸಿ ಅಕಾರ, ಇಕಾರ, ಕಕಾರ, ಚಕಾರ- ಇತ್ಯಾದಿಯಾಗಿ ಹೇಳುತ್ತಾರೆ. 'ರ' ವರ್ಣವನ್ನು ರಕಾರವೆಂದೂ ರೇಫವೆಂದೂ ಹೇಳುತ್ತಾರೆ. (ಅ)ಂ ಎಂಬಲ್ಲಿರುವ ಸೊನ್ನೆಗೆ ಅನುಸ್ವಾರವೆಂದೂ ಬಿಂದುವೆಂದೂ ಹೆಸರು. (ಅ)ಃ ಎಂಬಲ್ಲಿರುವ ಚುಕ್ಕೆಗಳಿಗೆ ವಿಸರ್ಗವೆಂದೂ ವಿಸರ್ಜನೀಯವೆಂದೂ ಹೆಸರಿದೆ. ಹೀಗೆ ಮುಖ್ಯವಾಗಿ ೫೦ ಅಕ್ಷರಗಳು ಬಳಕೆಯಲ್ಲಿವೆ.

## ವಿಭಾಗ

ಅಕಾರದಿಂದ ಔಕಾರದವರೆಗಿರುವ ೧೪ ಅಕ್ಷರಗಳು ಸ್ವರಗಳು. ಕಕಾರದಿಂದ ಳಕಾರದವರೆಗಿರುವ ೩೪ ಅಕ್ಷರಗಳು ವ್ಯಂಜನಗಳು. ಉಚ್ಚಾರಣೆಯ ಸೌಕರ್ಯಕ್ಕಾಗಿ ವ್ಯಂಜನಗಳಿಗೆ ಅಕಾರವನ್ನು ಸೇರಿಸಿ ಬರೆಯಲಾಗಿದೆ. ಕ್, ಖ್, ಗ್, ಘ್, ಙ್ - ಮೊದಲಾದ ಅರ್ಧಾಕ್ಷರಗಳು ಮಾತ್ರ ವ್ಯಂಜನಗಳೆಂದು ತಿಳಿಯಬೇಕು. ಮುಂದಿನ ಅಕಾರವು ಸ್ವರವೇ. ಕಕಾರವೆಂದರೆ ಕ್, ಯ ಕಾರವೆಂದರೆ ಯ್.

ಕಕಾರದಿಂದ ಮಕಾರದವರೆಗಿರುವ ೨೫ ಅಕ್ಷರಗಳಲ್ಲಿ ಐದೈದು ಅಕ್ಷರಗಳ ಗುಂಪಿಗೆ, ಕ್ರಮವಾಗಿ ಕವರ್ಗ, ಚವರ್ಗ, ಟವರ್ಗ, ತವರ್ಗ, ಪವರ್ಗಗಳೆಂದು ಹೆಸರು. ಇವು ವರ್ಗೀಯ ವ್ಯಂಜನಗಳು. ಯಕಾರದಿಂದ ಳಕಾರದವರೆಗಿನ ೯ ಅಕ್ಷರಗಳು ಯಾವ ವರ್ಗಕ್ಕೂ ಸೇರಿಲ್ಲ. ಇವು ಅವರ್ಗೀಯ ವ್ಯಂಜನಗಳು. ವಿಸರ್ಗ ಮತ್ತು ಅನುಸ್ವಾರಗಳನ್ನು ಸಂಸ್ಕೃತ ವ್ಯಾಕರಣದಲ್ಲಿ ಸ್ವರ ವ್ಯಂಜನಗಳ ಎರಡು ಗುಂಪಿನಲ್ಲಿಯೂ ಸೇರಿಸಲಾಗಿದೆ.

ಅಕ್ಷರವನ್ನು ಉಚ್ಚರಿಸಲು ತೆಗೆದುಕೊಳ್ಳುವ ಕಾಲಕ್ಕೆ ಮಾತ್ರಾ ಎನ್ನುತ್ತಾರೆ. **ಅ,ಇ,ಉ,ಋ,ಎ,ಒ** - ಎಂಬ ಹ್ರಸ್ವಗಳಿಗೆ ಒಂದು ಮಾತ್ರೆ. ಇವು ಏಕ ಮಾತ್ರಕ. **ಆ,ಈ,ಊ, ೠ,ಏ,ಐ,ಓ,ಔ** - ಈ ದೀರ್ಘಗಳಿಗೆ ಎರಡು ಮಾತ್ರೆ. ಇವು ದ್ವಿಮಾತ್ರಕ. ಪ್ಲುತವೆಂಬ ಮೂರು ಮಾತ್ರೆಗಳ ಸ್ವರವೂ ಇದೆ. ದೂರದಲ್ಲಿರುವವರನ್ನು ಕರೆಯುವಾಗ ಇದು ಕಂಡು ಬರುತ್ತದೆ. ಉದಾ: ಅಣ್ಣ 3, ಹರಿ 3, ರಾಮು 3. ಪ್ಲುತದ ಬಳಕೆ ಕಡಿಮೆಯಾದ್ದರಿಂದ ಇದನ್ನು ಅಕ್ಷರಮಾಲೆಯಲ್ಲಿ ಸೇರಿಸಿಲ್ಲ. ವ್ಯಂಜನಕ್ಕೆ ಅರ್ಧಮಾತ್ರಾ ಕಾಲ. ಅದು ಅರ್ಧಮಾತ್ರಕ.

ವ್ಯಂಜನಗಳಲ್ಲಿ **ಖ,ಘ,ಛ,ಝ,ಠ,ಢ,ಥ,ಧ,ಫ,ಭ,ಶ,ಷ,ಸ,ಹ** - ಇವು ಮಹಾಪ್ರಾಣಗಳು. ಉಳಿದವು ಅಲ್ಪಪ್ರಾಣಗಳು. ಪ್ರಾಣವೆಂದರೆ ಉಸಿರು. ಹೆಚ್ಚು ಉಸಿರಿನ ನೆರವಿನಿಂದ ಉಚ್ಚರಿಸಬೇಕಾದ ವರ್ಣ ಮಹಾಪ್ರಾಣ. ಕಡಿಮೆ ಉಸಿರಿನ ನೆರವಿನಿಂದ ಉಚ್ಚರಿಸಬೇಕಾದ ವರ್ಣ ಅಲ್ಪಪ್ರಾಣ. ವರ್ಗದ ಕಡೆಯಲ್ಲಿರುವ ಙ, ಞ, ಣ, ನ, ಮ ಗಳು ಅನುನಾಸಿಕಗಳು. ನಾಸಿಕದ (ಮೂಗಿನ) ಸಹಾಯದಿಂದ ಇವನ್ನು ಉಚ್ಚರಿಸುತ್ತೇವಾದ್ದರಿಂದ ಅನುನಾಸಿಕವೆಂದು ಹೆಸರು. ಯ, ವ, ಲ ಗಳಲ್ಲಿ ಅನುನಾಸಿಕಗಳೂ ಉಂಟು. ಉದಾ: ಸಂ+ಯಮ= ಸಯ್ಂಯಮ, ಸಂ+ವತ್ಸರ = ಸವ್ಂವತ್ಸರ, ಸಂ+ಲಾಪ = ಸಲ್ಂಲಾಪ. ಈ ಸ್ಥಳದಲ್ಲಿ ನಾವು ಮೊದಲನೆಯ ಯ ವ ಲ ಗಳನ್ನು ಅನುನಾಸಿಕಗಳನ್ನಾಗಿ ಉಚ್ಚರಿಸುತ್ತೇವೆ. ಈ ಅನುನಾಸಿಕಗಳು

ವಿಕಲ್ಪವಾಗಿ ಬರುತ್ತವೆಯಾದ್ದರಿಂದ ಸಂಯಮ, ಸಂವತ್ಸರ, ಸಂಲಾಪ ಎಂದೂ ಬರೆಯಬಹುದು. ಅನುಸ್ವಾರವನ್ನೂ ಉಚ್ಚರಿಸಬಹುದು.[1]

## ವಿಶೇಷ

ಕಿವಿಯಿಂದ ಕೇಳತಕ್ಕದ್ದು ಅಕ್ಷರ ಅಥವಾ ವರ್ಣ. ಬರವಣಿಗೆಯಲ್ಲಿ ಕಾಣತಕ್ಕದ್ದು ಲಿಪಿ. ಲಿಪಿ ಅನೇಕ ಬಗೆಯಾಗಬಹುದು. ಆದರೆ ವರ್ಣದ ಉಚ್ಚಾರಣೆ ಒಂದೇ. ಹಳಗನ್ನಡದಲ್ಲಿ ಱ,ೞ ಎಂಬೆರಡು ಅಕ್ಷರಗಳಿವೆ. 'ಱ' ಕ್ಕೆ ಶಕಟರೇಫ ವೆಂದೂ 'ೞ' ಕ್ಕೆ ಱೞ (ರಳ)ವೆಂದೂ ಹೆಸರು. ಅವುಗಳ ಉಚ್ಚಾರಣೆ ಹೇಗೆಂಬುದು ಸರಿಯಾಗಿ ತಿಳಿಯದು. ಉಚ್ಚಾರಣೆ ಕ್ರಮವಾಗಿ ರ,ಳ ಗಳಿಗೆ ಹೋಲುತ್ತಿದ್ದಿರಬಹುದು.

ಲ್ ಎಂಬ ಸಂಸ್ಕೃತ ಸ್ವರವು ಕ್ಲ್ಪ್ತ, ಕ್ಲ್ಪ್ತಿ ಎಂಬೆರಡು ಶಬ್ದಗಳಲ್ಲಿ ಮಾತ್ರ ಉಪಯುಕ್ತವಾಗಿದೆ. ಅದಕ್ಕೆ ದೀರ್ಘವಿಲ್ಲ. ಸಂಸ್ಕೃತದಲ್ಲಿ **ಏ, ಓ** ಗಳಿಗೆ ಹ್ರಸ್ವಗಳಿಲ್ಲ. ಆದ್ದರಿಂದ ಗೇಯ, ಗೋಪಿ ಮುಂತಾದ ಸಂಸ್ಕೃತ ಶಬ್ದಗಳನ್ನು ಬಳಸುವಾಗ ಹ್ರಸ್ವವನ್ನು ಬಳಸಬಾರದು.

## ಉಚ್ಚಾರಣೆ

ಹ್ರಸ್ವ ಅಕಾರದ ಉಚ್ಚಾರಣೆಯಲ್ಲಿ ಸ್ವಲ್ಪ ಭೇದ ಕಂಡುಬರುತ್ತದೆ. ಅಕ್ಕಿ, ಅತ್ತಿ, ಅಳು, ಹಂದಿ- ಮುಂತಾದ ಸ್ಥಳದ ಅಕಾರಕ್ಕೂ ಅಕ್ಕ, ಅಮ್ಮ, ಅಜ್ಜ, ಹಯ- ಮುಂತಾದ ಸ್ಥಳದ ಅಕಾರಕ್ಕೂ ಉಚ್ಚಾರಣೆಯಲ್ಲಿರುವ ಸೂಕ್ಷ್ಮವಾದ ಭೇದವನ್ನು ಗಮನಿಸಬಹುದು. ಹಸ್ತಿ-ಹಸ್ತ ಎಂಬೆಡೆಯಲ್ಲಿ ಹಕಾರದ ಮುಂದಿನ ಅಕಾರದ ಉಚ್ಚಾರಣೆಯಲ್ಲಿ ಈ ಭೇದ ಸ್ಪಷ್ಟವಾಗಿದೆ.[2]

ಅನುಸ್ವಾರದ ಉಚ್ಚಾರಣೆ ಪದದ ಕಡೆಯಲ್ಲಿ 'ಮ್' ಆಗುತ್ತದೆ. ಪದ ಮಧ್ಯದಲ್ಲಿ ಬರೆಹದ ಸೌಕರ್ಯಕ್ಕಾಗಿ ಅನುಸ್ವಾರವನ್ನು ಬರೆದರೂ ವರ್ಗೀಯ ವ್ಯಂಜನಗಳು ಪರವಾದಾಗ ಅದು ಆಯಾ ವರ್ಗದ ಅನುನಾಸಿಕವಾಗಿರುತ್ತದೆ.

---

1. ಸಲ್ಲಾಪ ಎಂಬ ಪ್ರಯೋಗವೂ ಇದೆ. ಇಲ್ಲಿ ಸತ್ + ಲಾಪ ಎಂದು ಬಿಡಿಸಿಕೊಳ್ಳಬೇಕು. ಇದು ಶುದ್ಧವಾದ ಶಬ್ದವಾದರೂ ಅರ್ಥಾನುಸಾರಿಯಾಗಿರುವ ಸರಿಯಾದ ಶಬ್ದವಾಗದು.

2. ಸಾಮಾನ್ಯವಾಗಿ ಉತ್ತರ ಕರ್ನಾಟಕದವರು 'ಕಮಲ' ಎಂಬಲ್ಲಿ ಲಕಾರದ ಮುಂದಿನ ಅಕಾರಕ್ಕೆ ಒಕಾರದ ಛಾಯೆಯನ್ನಿಟ್ಟಂತೆ ಉಚ್ಚರಿಸುತ್ತಾರೆ. ಶಿಕ್ಷಾಶಾಸ್ತ್ರದಲ್ಲಿ ಸ್ವರಗಳು ವಿವೃತಗಳೆಂದೂ ಹ್ರಸ್ವ ಅಕಾರವು ಮಾತ್ರ ಸಂವೃತ್ತವೆಂದೂ ಹೇಳಿದೆ. ಪಾಣಿನಿಯ 'ಅಅ' (ಅಷ್ಟಾ.೮-೪-೬೮) ಎಂಬ ಸೂತ್ರವು ಇದನ್ನೇ ಸ್ಪಷ್ಟಪಡಿಸಿದೆ. ಆದ್ದರಿಂದ ಒ ಕಾರದ ಛಾಯೆಯಿರುವಂತೆ ಹ್ರಸ್ವ 'ಅ' ಕಾರವನ್ನುಚ್ಚರಿಸುವುದೇ ಸರಿಯೆಂದು ತೋರುತ್ತದೆ.

ಉದಾ: **ಅಂಕ = ಅಙ್ಕ, ಸಂಗ = ಸಙ್ಗ ; ಮಂಚ = ಮಞ್ಚ, ಸಂಜೆ = ಸಞ್ಜೆ; ಅಂಟು = ಅಣ್ಟು, ಶುಂಠಿ= ಶುಣ್ಠಿ ; ಅಂತ = ಅನ್ತ ; ಎಂದನು = ಎನ್ದನು ; ಪಂಪ = ಪಮ್ಪ; ನಂಬು= ನಮ್ಬು.** ಅನುಸ್ವಾರಕ್ಕೆ ಯ ವ ಲ ಗಳು ಪರವಾದರೆ ಅನುನಾಸಿಕ ಯ ವ ಲ ಗಳು ವಿಕಲ್ಪವಾಗಿ ಬರುತ್ತವೆಯೆಂದು ಹಿಂದೆ ಬರೆದಿದೆ. ರಾಟ್, ರಾಜ್ಯ- ಇವೆರಡು ಪರವಾದಾಗ ಮಾತ್ರ ಮಕಾರವೆ ಬರುತ್ತದೆ. ಉದಾ : ಸಂ+ ರಾಟ್ = ಸಮ್ರಾಟ್, ಸಾಂ+ ರಾಜ್ಯ = ಸಾಮ್ರಾಜ್ಯ. ಶ,ಷ,ಸ,ಹ ಗಳು ಪರವಾದಾಗ ಎಲ್ಲೆಡೆಯೂ ಅನುಸ್ವಾರವೇ : ಅಂಶ, ಶಿಂಷಾ, ಹಂಸ, ಸಿಂಹ - ಇಲ್ಲಿ ಅನುಸ್ವಾರವನ್ನು ಮಕಾರದಂತೆ ಉಚ್ಚರಿಸಬಾರದು. ಮಕಾರದ ಉಚ್ಚಾರಣೆಯಲ್ಲಿ ತುಟಿಗಳು ಕೂಡುತ್ತವೆ. ಅನುಸ್ವಾರವನ್ನು ಉಚ್ಚರಿಸುವಾಗ ಕೂಡುವುದಿಲ್ಲ.

ಹಕಾರಕ್ಕೆ ಣ,ನ,ಮ,ಯ,ರ,ಲ,ವ ಗಳು ಪರವಾದಾಗ ಹಕಾರದ ಉಚ್ಚಾರಣೆ ಸಡಿಲವಾಗಿರುತ್ತದೆ. ಅದನ್ನು ತೇಲಿಸಿ ಉಚ್ಚರಿಸಬೇಕು. ಪೂರ್ವಾಹ್ಣ, ಮಧ್ಯಾಹ್ನ, ಬ್ರಹ್ಮ, ಸಹ್ಯ, ಹ್ರೀ, ಪ್ರಹ್ಲಾದ, ಆಹ್ವಾನ- ಇವುಗಳಲ್ಲಿ ಹಕಾರವನ್ನು ತೇಲಿಸಬೇಕು. ಈಗ ರೂಢಿಯಲ್ಲಿರುವ ಉಚ್ಚಾರಣೆ ಸರಿಯಾದದ್ದು. ಇಲ್ಲಿ ಹಕಾರವನ್ನು ಸ್ಫುಟವಾಗಿ ಒಡೆದು ಉಚ್ಚರಿಸತಕ್ಕದ್ದಲ್ಲ. ಆದರೆ ಬ್ರಮ್‌ಹ, ಪ್ರಲ್‌ಹಾದ - ಮುಂತಾದ ಉಚ್ಚಾರಣೆ ತಪ್ಪು.

ಅನುಸ್ವಾರ ವಿಸರ್ಗಗಳೆರಡೂ ಸ್ವರದ ಮುಂದೆ ಮಾತ್ರ ಬರುತ್ತವೆ. ಸ್ವತಂತ್ರವಾಗಿ ಇವುಗಳ ಉಚ್ಚಾರಣೆ ಇಲ್ಲ. ಇವನ್ನು ಕೇಶಿರಾಜನು ಯೋಗವಾಹವೆಂದು ಕರೆದಿದ್ದಾನೆ. ಸಂಸ್ಕೃತ ವ್ಯಾಕರಣದಲ್ಲಿ ಇವಕ್ಕೆ ಅಯೋಗವಾಹವೆಂದು ಹೆಸರಿದೆ.

**ಗುಣಿತಾಕ್ಷರ, ಸಂಯುಕ್ತಾಕ್ಷರ.**

ವ್ಯಂಜನಕ್ಕೆ ಸ್ವರವನ್ನು ಸೇರಿಸಿ ಬರೆಯುವ ಅಕ್ಷರಕ್ಕೆ ಗುಣಿತಾಕ್ಷರವೆಂದು ಹೆಸರು: **ಕ,ಕಾ,ಕಿ,ಕೀ; ಚ,ಚಾ,ಚಿ,ಚೀ,ಚು,ಚೂ; ತೃ,ತೆ, ತೇ,ತೈ,ತೊ,ತೋ,ತೌ.** ಕ್ರಮವಾಗಿ ಬರೆವ ಗುಣಿತಾಕ್ಷರ ಮಾಲೆಗೆ ಕಾಗುಣಿತವೆಂಬ ಹೆಸರು ರೂಢಿಯಲ್ಲಿದೆ.

ವ್ಯಂಜನದೊಡನೆ ಇನ್ನೊಂದು ವ್ಯಂಜನ ಸೇರಿದಾಗ ಆ ಸಮುದಾಯವನ್ನು ಸಂಯುಕ್ತಾಕ್ಷರವೆಂದೂ ಒತ್ತಕ್ಷರವೆಂದೂ ಹೇಳುತ್ತಾರೆ ; **ಕ್ತ್, ಗ್ರ್, ಕ್ಷ್, ಜ್ಞ್, ಪ್ಪ್,ಜ್ಞ್,ಸ್ಸ್.**

೧. ಸಂಯುಕ್ತಾಕ್ಷರದ ಬರವಣಿಗೆಯಲ್ಲಿ ವಿಶೇಷ ಉಂಟು. ಹೇಗೆಂದರೆ- ಕ್+ ತಿ = ಕ್ತಿ: ಇಲ್ಲಿ 'ಕ್' ಎಂಬುದು ವ್ಯಂಜನ, 'ತಿ' ಎಂಬುದು ಗುಣಿತಾಕ್ಷರ. ಇವೆರಡನ್ನೂ ಸೇರಿಸಿದಾಗ 'ಕಿ' ಎಂದು ಬರೆದು ಅದಕ್ಕೆ ತಕಾರದ ಒತ್ತನ್ನು ಕೊಡುತ್ತೇವೆ. ಇದನ್ನು 'ಕ್‌ತಿ' ಎಂದು ಓದಬೇಕು. 'ಕಿತ್' ಎಂದು ಓದಬಾರದು. ಹೀಗೆಯೇ

ಪ್ರ (ಪ್‌ರ), ಕ್ಷಾ (ಕ್‌ಷಾ),ಜ್ಞಾ (ಜ್ ಞಾ) ಸ್ತೂ (ಸ್‌ತೂ) ಹ್ರೀ (ಹ್‌ರೀ) - ಮುಂತಾದವುಗಳನ್ನು ತಿಳಿಯಬೇಕು.

೨. ಸಾಮಾನ್ಯವಾಗಿ ಒತ್ತುಗಳು ಲಿಪಿಯಲ್ಲಿ ಪೂರ್ಣಾಕ್ಷರಗಳನ್ನು ಹೋಲುತ್ತವೆ. ಉದಾ : **ತ್ಕ, ಙ್ಖ, ಕ್ಷ, ಲ್ಫ.** ಆದರೆ ಮುಂದೆ ಬರೆದವು ಬೇರೆ ಆಕೃತಿಯಲ್ಲಿರುತ್ತವೆ: **ಕ್ತ, ಹ್ನ, ತ್ಮ, ಸ್ಯಾ, ಬ್ರಾ, ಹ್ಲಾ.** ಇಲ್ಲಿ **ತ, ನ, ಮ, ಯ, ರ, ಲ-** ಒತ್ತುಗಳು ಬೇರೆ ಆಕೃತಿಯಲ್ಲಿರುವುದನ್ನು ಗಮನಿಸಬೇಕು.

೩. ರೇಫದ ಮುಂದೆ ವ್ಯಂಜನವು ಬಂದಾಗ ಅದನ್ನು ಎರಡು ವಿಧಗಳಲ್ಲಿ ಬರೆಯುತ್ತಾರೆ: ಅರ್ಕ - ಅರ್ಕ, ಮೂರ್ಛೆ - ಮೂರ್ಛೆ, ನಿರ್ಣೀತ - ನಿರ್ಣೀತ, ದುರ್ಜ್ಞೇಯ - ದುರ್ಜ್ಞೇಯ, ನಿರ್ಣೀತ, ದುರ್ಜ್ಞೇಯ- ಎಂದು ಬರೆಯುವುದೂ ಉಂಟು. ರೇಫದ ಒತ್ತು 'ೞ' ಎಂಬುದನ್ನು 'ಅರ್ಕಾವೊತ್ತು' ಎನ್ನುತ್ತಾರೆ.



## ೨. ಸಂಧಿ ಪ್ರಕರಣ

ಅಕ್ಷರಗಳು ಒಂದಕ್ಕೊಂದು ಸೇರುವುದು ಸಂಧಿ ಎನಿಸುತ್ತದೆ. ಎರಡು ಶಬ್ದಗಳು ಸೇರುವುದನ್ನೂ ಸಂಧಿ ಎನ್ನಬಹುದು. ಆಗಲೂ ಅಕ್ಷರಗಳ ಸೇರಿಕೆ ಇದ್ದೇ ಇರುತ್ತದೆ. ಹೀಗೆ ಅಕ್ಷರಗಳು ಸಂಧಿಸಿದಾಗ ಆಗುವ ಅಕ್ಷರಗಳ ಬದಲಾವಣೆಗೆ ಸಂಧಿಕಾರ್ಯವೆಂದು ಹೆಸರು. ಈ ಬದಲಾವಣೆಯಲ್ಲಿ ಮೂರು ಬಗೆ - ಲೋಪ, ಆಗಮ, ಆದೇಶ. ಯಾವ ಬದಲಾವಣೆಯೂ ಆಗದಿರುವುದಕ್ಕೆ ಪ್ರಕೃತಿಭಾವ ಎಂದು ಹೆಸರು.

೧. ಇರುವ ಅಕ್ಷರವು ಕಾಣಿಸದೆ ಲುಪ್ತವಾಗುವುದಕ್ಕೆ **ಲೋಪ**ವೆಂದು ಹೆಸರು.

ಉದಾ: ನಮ್ಮ + ಅರಸ = ನಮ್ಮರಸ

(ಮಕಾರದ ಮುಜಂದಿನ ಅಕಾರಕ್ಕೆ ಲೋಪ)

ಊರು + ಇಂದ = ಊರಿಂದ (ಉಕಾರಕ್ಕೆ ಲೋಪ)

ಬೇರೆ + ಒಬ್ಬರು = ಬೇರೊಬ್ಬರು (ಎಕಾರಕ್ಕೆ ಲೋಪ)

೨. ಇರುವ ಅಕ್ಷರದ ಜೊತೆಗೆ ಹೊಸದಾಗಿ ಇನ್ನೊಂದು ಅಕ್ಷರ ಸೇರುವುದು **ಆಗಮ.**

ಉದಾ : ಹುಲಿ + ಇಂದ = ಹುಲಿಯಿಂದ (ಯಕಾರಾಗಮ)

ಹಸು + ಅನ್ನು = ಹಸುವನ್ನು ( ವಕಾರಾಗಮ )

೩. ಇರುವ ಅಕ್ಷರವನ್ನು ಹೋಗಲಾಡಿಸಿ ಅದರ ಸ್ಥಾನದಲ್ಲಿ ಇನ್ನೊಂದು ಬರುವುದು **ಆದೇಶ.**

ಉದಾ : ಮಳೆ + ಕಾಲ = ಮಳೆಗಾಲ (ಗಕಾರಾದೇಶ)

ಬೆಟ್ಟ + ತಾವರೆ = ಬೆಟ್ಟದಾವರೆ (ದಕಾರಾದೇಶ)

೪. ಓಹೊ + ಆಗಲಿ = ಓಹೊ ಆಗಲಿ

ಅಣ್ಣ + ಇಲ್ಲಿ ಬಾ = ಅಣ್ಣ ಇಲ್ಲಿ ಬಾ ಇದು **ಪ್ರಕೃತಿಭಾವ.**

ಕನ್ನಡದಲ್ಲಿ ಸಂಸ್ಕೃತ ಶಬ್ಧಗಳು ಸೇರಿವೆಯಾದ್ದರಿಂದ ಸಂಧಿಯನ್ನು ಕನ್ನಡ ಸಂಧಿ, ಸಂಸ್ಕೃತ ಸಂಧಿ - ಎಂದು ವಿಂಗಡಿಸಬಹುದು. ಸೇರುವ ಪ್ರಕೃತಿ ಪ್ರತ್ಯಯಗಳಲ್ಲಿ ಯಾವುದಾದರೊಂದು ಕನ್ನಡವಾದರೂ ಕನ್ನಡ ಸಂಧಿ, ಎರಡೂ ಶಬ್ದಗಳೂ ಸಂಸ್ಕೃತವಾದರೆ ಸಂಸ್ಕೃತ ಸಂಧಿ.

## ಕನ್ನಡ ಸಂಧಿ

### ೧. ಲೋಪಸಂಧಿ

೧. ಸ್ವರದ ಮುಂದೆ ಸ್ವರವು ಬಂದಾಗ ಸಾಮಾನ್ಯವಾಗಿ ಹಿಂದಿನ ಸ್ವರಕ್ಕೆ ಲೋಪವಾಗುವುದು.

ಉದಾ : ನಮ್ಮ + ಅವನು = ನಮ್ಮವನು ಊರು + ಅನ್ನು = ಊರನ್ನು

ಅಲ್ಲಿ + ಅಲ್ಲಿ = ಅಲ್ಲಲ್ಲಿ ಬೇರೆ + ಒಬ್ಬನು = ಬೇರೊಬ್ಬನು

ಹೇಳಬೇಕಾದ ಅರ್ಥವು ತೋರದೆ ಇರುವಾಗ ಅಥವಾ ಅರ್ಥವು ಕೆಡುವ ಪಕ್ಷದಲ್ಲಿ ಲೋಪವಿಲ್ಲ.

ಉದಾ : ನೆಲ + ಇದು = ನೆಲಿದು

ಮಡು + ಇಂದ = ಮಡಿಂದ } ಹೀಗೆ ಲೋಪವಾಗುವುದಿಲ್ಲ. ಇದನ್ನು ರೂಢಿಯಿಂದ ತಿಳಿಯಬೇಕು

ಮನೆ + ಅನ್ನು = ಮನನ್ನು

ಸಂಧಿಕಾರ್ಯಗಳನ್ನು ಮಾಡುವಾಗ ಈ ನಿಯಮಗಳನ್ನು ಗಮನದಲ್ಲಿ ಇಟ್ಟಿರಬೇಕು.

೧. ವಾಕ್ಯದಲ್ಲಿ ಸ್ವತಂತ್ರವಾದ ಎರಡು ಪದಗಳನ್ನು ಸೇರಿಸಿದಾಗ ಸಂಧಿಕಾರ್ಯ ಬರಬಹುದು, ಬರದಿರಬಹುದು. ಅದು ಹೇಳತಕ್ಕವರ ಇಚ್ಛೆಯನ್ನು ಅವಲಂಬಿಸುತ್ತದೆ. ಉದಾ : ನಮ್ಮರಸ, ನಮ್ಮ ಅರಸ; ಗಮನದಲ್ಲಿಟ್ಟಿರಬೇಕು, ಗಮನದಲ್ಲಿ ಇಟ್ಟಿರಬೇಕು.

೨. ಸಮಾಸದಲ್ಲಿ ಎರಡು ಪದಗಳು ಸೇರಿದಾಗ ಸಂಧಿಕಾರ್ಯವು ನಿತ್ಯವಾಗಿ ಬರುತ್ತದೆ. ಉದಾ : ಮಳೆಗಾಲ, ಬೆಟ್ಟದಾವರೆ. 'ಮಳೆಕಾಲ, ಬೆಟ್ಟತಾವರೆ' ಎನ್ನುವುದು ಸರಿಯಲ್ಲ.

ಮೇಲ್ಕಂಡ ನಿಯಮಗಳು ಎಲ್ಲ ಸಂಧಿ ಕಾರ್ಯಗಳಿಗೂ ಅನ್ವಯಿಸುತ್ತವೆ.

## ೨. ಆಗಮ ಸಂಧಿ

೧. ಆ,ಇ,ಈ,ಎ,ಏ,ಐ ಗಳ ಮುಂದೆ ಸ್ವರವಿದ್ದರೆ ನಡುವೆ ಯಕಾರ ಬರುವುದು.

ಉದಾ:

ಕಾ + ಅದೆ = ಕಾಯದೆ | ಮನೆ + ಅಲ್ಲಿ = ಮನೆಯಲ್ಲಿ

ಬಾ + ಎಂದನು = ಬಾಯೆಂದನು | ಬೇ + ಇಸು = ಬೇಯಿಸು

ಕುರಿ + ಅನ್ನು = ಕುರಿಯನ್ನು | ಮೇ +ಉತ್ತದೆ = ಮೇಯುತ್ತದೆ

ಹರಿ + ಇಂದ = ಹರಿಯಿಂದ | ಕೈ + ಎತ್ತು = ಕೈ ಎತ್ತು

ಈ + ಅಲು = ಈಯಲು | ಸ್ತ್ರೀ + ಅರು = ಸ್ತ್ರೀಯರು

'ಸಾ' ಧಾತುವಿಗೆ 'ಉ' ಎಂಬ ಕೃತ್ ಪ್ರತ್ಯಯಪರವಾದರೆ ನಡುವೆ ವಕಾರ ಬರುತ್ತದೆ. ಉದಾ : ಸಾವು.

೨. ಉ,ಊ,ಒ,ಓಗಳು ಪರವಾದರೆ 'ಆ' ಶಬ್ದದ ಮುಂದೆ ವಕಾರವೂ 'ಈ' ಶಬ್ದದ ಮುಂದೆ ಯಕಾರ ವಕಾರಗಳೂ ಬರುತ್ತವೆ.

ಉದಾ:

ಆ + ಉಂಗುರ = ಆವುಂಗುರ | ಆ + ಒಂಟೆ = ಆವೊಂಟೆ
ಆ + ಊರು = ಆವೂರು | ಆ + ಓಲೆ = ಆವೋಲೆ

ಈಯುಂಗುರ, ಈವುಂಗುರ | ಈಯೊಂಟೆ, ಈವೊಂಟೆ
ಈಯೂರು, ಈವೂರು | ಈಯೋಲೆ, ಈವೋಲೆ

ಇಲ್ಲಿ ಸ್ವತಂತ್ರವಾದ ಎರಡು ಪದಗಳಿರುವುದರಿಂದ ಸಂಧಿಯನ್ನು ಮಾಡದೆಯೂ ಇರಬಹುದು. ಆ ಉಂಗುರ, ಈ ಒಂಟೆ. ಹೀಗೆ ಸಂಧಿಯನ್ನು ಮಾಡದಿರುವುದೇ ಹೆಚ್ಚಾಗಿ ಬಳಕೆಯಲ್ಲಿದೆ.

೩. ಉ,ಊ,ಋ,ೠ,ಓ,ಔ-ಗಳ ಮುಂದೆ ಸ್ವರವಿದ್ದರೆ ನಡುವೆ ವಕಾರ ಬರುವುದು.

ಉದಾ :

ಗುರು + ಅವನು = ಗುರುವವನು    ಕೃ + ಅನ್ನು = ಕೃವನ್ನು
ಮಗು + ಇಗೆ = ಮಗುವಿಗೆ    ಗೋ + ಇಗೆ = ಗೋವಿಗೆ
ಹೂ + ಇದು = ಹೂವಿದು    ನೌ + ಇದು = ನೌವಿದು
ಪಿತೃ + ಇನ = ಪಿತೃವಿನ

೪. 'ನೋ' ಧಾತುವಿಗೆ 'ಉ' ಎಂಬ ಕೃತ್ ಪ್ರತ್ಯಯ ಪರವಾದಾಗ ಉಕಾರಾಗಮ ಬರುತ್ತದೆ. ಉಳಿದೆಡೆ ಯಕಾರ ಬರುತ್ತದೆ.

ಉದಾ : ನೋ + ಉ = ನೋವು
ನೋ + ಅಲು = ನೋಯಲು
ನೋ + ಉತ್ತದೆ = ನೋಯುತ್ತದೆ.

ನೋವನ್ನು ಎಂಬುದು ನೋವು + ಅನ್ನು ಎಂದು ಬಿಡಿಸುವುದರಿಂದ ಆಗಿದೆ.

೫. ಪ್ರಾತಿಪದಿಕದ ಅಕಾರಕ್ಕೆ ಸ್ವರ ಪರವಾದರೆ ನಡುವೆ ವಕಾರಾಗಮ ಬರುವುದು.

ಉದಾ :

ನೆಲ + ಅನ್ನು = ನೆಲವನ್ನು    ಧನ + ಏಕೆ = ಧನವೇಕೆ?
ಕುಲ + ಏನು = ಕುಲವೇನು?    ಹೊಲ + ಇದು = ಹೊಸವಿದು.

ಪ್ರತ್ಯಯದ ಅಕಾರವಾದಲ್ಲಿ ಅದಕ್ಕೆ ಲೋಪ ಬರುತ್ತದೆ.

ಉದಾ :

ನಮ್ಮ + ಅರಸ = ನಮ್ಮರಸ    ಅವನ + ಇಚ್ಛೆ = ಅವನಿಚ್ಛೆ

ಇವು ಸ್ವತಂತ್ರ ಪದಗಳಾದ್ದರಿಂದ ಸಂಧಿಯನ್ನು ಮಾಡದೆಯೂ ಇರಬಹುದೆಂಬುದನ್ನು ನೆನಪಿನಲ್ಲಿಡಬೇಕು.

## ೫. ಆದೇಶ ಸಂಧಿ

೧. ಸಮಾಸದಲ್ಲಿ ಎರಡನೆಯ ಪದದ ಆದಿಯಲ್ಲಿರುವ ಕ,ತ,ಪ ಗಳಿಗೆ ಕ್ರಮವಾಗಿ ಗ,ದ,ಬಗಳು ಆದೇಶವಾಗಿ ಬರುತ್ತವೆ.

ಉದಾ :

ಮಳೆ + ಕಾಲ = ಮಳೆಗಾಲ
ಹುಲ್ಲು + ಕಾವಲು = ಹುಲ್ಲುಗಾವಲು
ಹೊಸ + ಕನ್ನಡ = ಹೊಸಗನ್ನಡ
ಬೆಟ್ಟ + ತಾವರೆ = ಬೆಟ್ಟದಾವರೆ
ಕೈ + ತಪ್ಪು = ಕೈದಪ್ಪು
ಹೂ + ತೋಟ = ಹೂದೋಟ
ಕಣ್ + ಪನಿ = ಕಂಬನಿ
ಎಂಟು + ಹತ್ತು = ಎಂಬತ್ತು

ಹೊಸಗನ್ನಡದಲ್ಲಿ ಗ ದ ಬ ಗಳು ಕೆಲವೆಡೆ ಬರುವುದಿಲ್ಲ - ಕೈಪಿಡಿ, ಹೊಸ ಪಂಚೆ, ಹೆಣ್ಣು ಕುದುರೆ.

ಕನ್ನಡದಲ್ಲಿ ಆದೇಶಸಂಧಿಯು ಸಮಾಸದಲ್ಲಿ ಬರುತ್ತದೆ. ಹೆಚ್ಚಿನವನ್ನು ಸಮಾಸ ಪ್ರಕರಣದಲ್ಲಿ ತಿಳಿಸಲಾಗುವುದು.

## ೬. ಪ್ರಕೃತಿಭಾವ

ಕೆಲವೆಡೆ ಸ್ವರಕ್ಕೆ ಸ್ವರ ಪರವಾದಾಗ ಯಾವ ಸಂಧಿಕಾರ್ಯವೂ ನಡೆಯುವುದಿಲ್ಲ. ಇದನ್ನು ಪ್ರಕೃತಿಭಾವ ಎನ್ನುತ್ತಾರೆ.

೧. ಸಂಬೋಧನೆಯ ಶಬ್ದ, ಭಾವಸೂಚಕಾವ್ಯಯ, ಅನುಕರಣ ಶಬ್ದ - ಇವುಗಳಿಗೆ ಸ್ವರವು ಪರವಾದರೆ ಸಂಧಿಕಾರ್ಯವು ಬರುವುದಿಲ್ಲ.

ಉದಾ: ಸಂಬೋಧನೆ- ಅಣ್ಣ + ಓಡಿ ಬಾ, ರಾಮ + ಎಲ್ಲಿದ್ದೀಯೆ?

" (ಪ್ಲುತ) ಅಣ್ಣ$^3$ + ಎಲ್ಲಿರುವೆ, ಹರಿ$^3$ + ಇತ್ತ ಬಾ

ಭಾವಸೂಚಕಾವ್ಯಯ - ಎಲಾ + ಇವನು ಯಾರು?

ಅಬ್ಬಾ + ಅದು ಹಾವೆ?

ಓಹೊ + ಆಗಲಿ

ಅನುಕರಣ - ಗುಳುಗುಳು + ಎಂದು ಶಬ್ದವಾಯಿತು.

ಗಡಗಡ + ಎನ್ನುತ್ತದೆ.

ಇವು ಸ್ವತಂತ್ರ ಪದಗಳಾದ್ದರಿಂದ ಸಂಧಿ ಬಾರದಿರುವುದು ಸರಿಯೇ. ಆದರೆ ವಿಕಲ್ಪವಾಗಿಯೂ ಸಂಧಿಯನ್ನು ಮಾಡಬಾರದು.

೨. 'ಆ' ಶಬ್ದದ ಮುಂದೆ ಅ,ಆ,ಐ, ಔ ಗಳು ಬಂದರೆ ಸಂಧಿಯಾಗುವುದಿಲ್ಲ.

ಉದಾ :

ಆ ಅಂಗಡಿ, ಆ ಆನೆ, ಆ ಐಶ್ವರ್ಯ, ಆ ಔತಣ.

'ಈ' ಶಬ್ದದ ಮುಂದೆ ಬಂದರೆ ವಿಕಲ್ಪವಾಗಿ ಯಕಾರಾಗಮವಾಗುವುದುಂಟು.

ಈ ಅಂಗಡಿ-ಈಯಂಗಡಿ, ಈ ಆನೆ- ಈಯಾನೆ, ಈ ಐಶ್ವರ್ಯ- ಈಯೈಶ್ವರ್ಯ.

## ಸಂಸ್ಕೃತ ಸಂಧಿ

## ಸ್ವರಸಂಧಿಗಳು

### ೧. ಸವರ್ಣದೀರ್ಘಸಂಧಿ

ಅ, ಆ, ಇ, ಈ, ಉ, ಊ ಗಳಿಗೆ ಸವರ್ಣಸ್ವರಗಳು ಪರವಾದರೆ ಪೂರ್ವಪರ ವರ್ಣಗಳಿಗೆ ಒಂದೇ ಸವರ್ಣದೀರ್ಘವು ಆದೇಶವಾಗಿ ಬರುತ್ತದೆ.

ಸವರ್ಣಸ್ವರವೆಂದರೆ ಸಮಾನ ಸ್ವರ

ಅ ಆ ಗಳಿಗೆ ಅ ಆ, ಇ ಈಗಳಿಗೆ ಇ ಈ, ಉ ಊ ಗಳಿಗೆ ಉ ಊ ಸವರ್ಣ ಸ್ವರಗಳು.

ಉದಾ: ದೈತ್ಯ + ಅರಿ = ದೈತ್ಯಾರಿ (ಅ + ಅ ಗಳ ಸ್ಥಾನದಲ್ಲಿ ಒಂದೇ ಆಕಾರ ಬಂದಿದೆ)

ಶುಭ + ಆಶಯ = ಶುಭಾಶಯ

ವಿದ್ಯಾ + ಅಭ್ಯಾಸ = ವಿದ್ಯಾಭ್ಯಾಸ

ಮಹಾ + ಆತ್ಮಾ = ಮಹಾತ್ಮಾ

ಕವಿ + ಇಂದ್ರ = ಕವೀಂದ್ರ

ಗಿರಿ + ಈಶ = ಗಿರೀಶ

ಗುರು + ಉಪದೇಶ = ಗುರೂಪದೇಶ

ವಧೂ + ಉಪೇತ = ವಧೂಪೇತ

### ೨. ಗುಣಸಂಧಿ

ಅ,ಆ ಕಾರಗಳ ಮುಂದೆ ಇ,ಈ ಕಾರಗಳಿದ್ದರೆ ಏಕಾರವೂ ಉ ಊ ಕಾರಗಳಿದ್ದರೆ ಓ ಕಾರವೂ ಋಕಾರವಿದ್ದರ ಅರ್ ಎಂಬುದೂ ಆ ಎರಡು ಸ್ವರಗಳ ಸ್ಥಾನದಲ್ಲಿ ಆದೇಶವಾಗಿ ಬರುತ್ತವೆ. ಇದು ಗುಣಸಂಧಿ. ಏ,ಓ,ಅರ್ - ಎಂಬವುಗಳಿಗೆ ಸಂಸ್ಕೃತ ವ್ಯಾಕರಣದಲ್ಲಿ ಗುಣ ಎಂಬ ಸಂಜ್ಞೆ ಇದೆ.

ಉದಾ : ದೇವ + ಇಂದ್ರ = ದೇವೇಂದ್ರ

(ಅ ಇ ಗಳ ಸ್ಥಾನದಲ್ಲಿ ಒಂದೇ ಏಕಾರ ಬಂದಿದೆ)

ರಮಾ + ಈಶ = ರಮೇಶ

ಚಂದ್ರ + ಉದಯ = ಚಂದ್ರೋದಯ

ಬಲ + ಊರ್ಜಿತ = ಬಲೋರ್ಜಿತ

ದೇವ + ಋಷಿ = ದೇವರ್ಷಿ

ಮಹಾ + ಋಷಿ = ಮಹರ್ಷಿ

### ೩. ವೃದ್ಧಿಸಂಧಿ

ಅ,ಆ ಕಾರಗಳ ಮುಂದೆ ಏ, ಐ ಕಾರಗಳಿದ್ದರೆ ಐ ಕಾರವೂ ಓ,ಔ ಕಾರಗಳಿದ್ದರೆ ಔ ಕಾರವೂ ಆ ಎರಡೂ ಸ್ವರಗಳ ಸ್ಥಾನದಲ್ಲಿ ಆದೇಶವಾಗಿ ಬರುತ್ತವೆ. ಇದು ವೃದ್ಧಿಸಂಧಿ. ಐ,ಔ ಕಾರಗಳಿಗೆ ವೃದ್ಧಿಯೆಂದು ಹೆಸರು.

ಉದಾ : ಲೋಕ + ಏಕವೀರ = ಲೋಕೈಕವೀರ

ಪ್ರಥಮ + ಏಕಾದಶಿ = ಪ್ರಥಮೈಕಾದಶಿ

ಅಷ್ಟ + ಐಶ್ವರ್ಯ = ಅಷ್ಟೈಶ್ವರ್ಯ

ವನ + ಓಷಧಿ = ವನೌಷಧಿ

ಗಂಗಾ + ಓಘ = ಗಂಗೌಘ

ಘನ + ಔದಾರ್ಯ = ಘನೌದಾರ್ಯ

ಮಹಾ + ಔಷಧ = ಮಹೌಷಧ

### ೪. ಯಣ್‌ಸಂಧಿ

ಇ, ಈ, ಉ, ಊ, ಋ ಕಾರಗಳಿಗೆ ಸವರ್ಣವಲ್ಲದ ಸ್ವರವು ಪರವಾದಾಗ ಇ, ಈ ಕಾರಗಳಿಗೆ ಯ ಕಾರವೂ ಉ,ಊ ಕಾರಗಳಿಗೆ ವ ಕಾರವೂ, ಋ ಕಾರಕ್ಕೆ ರೇಫವೂ ಆದೇಶವಾಗಿ ಬರುತ್ತದೆ. ಅದು ಯಣ್‌ಸಂಧಿ. ಯ, ರ, ಲ, ವ ಗಳಿಗೆ ಯಣ್ ಎಂದು ಹೆಸರು.

ಉದಾ : ಪ್ರತಿ + ಉತ್ತರ = ಪ್ರತ್ಯುತ್ತರ

ನದೀ + ಆದಿ = ನದ್ಯಾದಿ

ಗುರು + ಆಜ್ಞೆ = ಗುರ್ವಾಜ್ಞೆ

ವಧೂ + ಆಗಮನ = ವಧ್ವಾಗಮನ

ಪಿತೃ + ಅರ್ಜಿತ = ಪಿತ್ರಾರ್ಜಿತ (ಅ + ಅರ್ಜಿತ = ಆರ್ಜಿತ)

**೫. ಜಶ್ತ್ವ ಸಂಧಿ**

ಸಮಾಸದಲ್ಲಿ ಪೂರ್ವಪದದ ಕಡೆಯಲ್ಲಿರುವ ಕ,ಚ,ಟ,ತ,ಪ ಗಳಿಗೆ ಆ ವರ್ಗದ ಮೂರನೆಯ ವರ್ಗವು ಆದೇಶವಾಗಿ ಬರುತ್ತದೆ. ಮೂರನೆಯ ವರ್ಣಗಳೆಂದರೆ ಗ,ಜ,ಡ,ದ,ಬ ಗಳು (ಇವುಗಳಿಗೆ ಜಶ್ ಎಂದು ಹೆಸರು).

ಉದಾ : ವಾಕ್ + ಈಶ = ವಾಗೀಶ

ವಾಕ್ + ದಾನ = ವಾಗ್ದಾನ

ದಿಕ್ + ಅಂತ = ದಿಗಂತ

ಅಜ್ + ಆದಿ = ಅಜಾದಿ (ಅಜ್ = ಸ್ವರ)

ಷಟ್ + ಆನನ = ಷಡಾನನ

ವಿರಾಟ್ + ರೂಪ = ವಿರಾಡ್ರೂಪ

ಸತ್ + ಉದ್ದೇಶ = ಸದುದ್ದೇಶ

ಬೃಹತ್ + ಆಕಾರ = ಬೃಹದಾಕಾರ

ಸತ್ + ಭಾವನೆ = ಸದ್ಭಾವನೆ

ಚಿತ್ + ಆನಂದ = ಚಿದಾನಂದ

ಅಪ್ + ಜ = ಅಬ್ಜ

ಅಪ್ + ಧಿ = ಅಬ್ಧಿ

ಸುಪ್ + ಅಂತ = ಸುಬಂತ (ಸುಪ್=ನಾಮಪದದ ವಿಭಕ್ತಿ)

ಆದರೆ ಕ, ಚ, ಟ, ತ, ಪ ಗಳಿಗೆ ಪ್ರತಿಯೊಂದು ವರ್ಗದ ಮೊದಲನೆಯ ಎರಡು ಅಕ್ಷರಗಳೂ ಅನುನಾಸಿಕಗಳೂ ಶ, ಷ, ಸ, ಹ ಗಳೂ ಪರವಾದರೆ ಜಶ್ತ್ವಸಂಧಿ ಬರುವುದಿಲ್ಲ.

ವಾಕ್ + ಕಲಹ = ವಾಕ್ಕಲಹ

ವಾಕ್ + ಛಲ = ವಾಕ್‌ಛಲ

ದಿಕ್ + ಪತಿ = ದಿಕ್ಪತಿ

ದಿಕ್ + ಸೂಚಿ = ದಿಕ್ಸೂಚಿ

ಷಟ್ + ಪದೀ = ಷಟ್ಪದೀ

ಸತ್ + ಫಲ = ಸತ್ಫಲ

ಸತ್ + ಸಂಗ = ಸತ್ಸಂಗ

ಹೀಗೆಯೇ ಅನುನಾಸಿಕಗಳು ಪರವಾದಾಗ ವಾಙ್ನಿಯಮ, ಭಗವನ್ನಾಮ, ಚಿನ್ಮಯ ಮುಂತಾದ ಸ್ಥಳಗಳಲ್ಲಿ ಜಶ್ತ್ವವಿಲ್ಲ. ಇಲ್ಲಿ ಮುಂದೆ ಹೇಳುವ ಅನುನಾಸಿಕ ಸಂಧಿ ಬರುತ್ತದೆ.

## ೬. ಶ್ಚುತ್ವಸಂಧಿ

ಸಕಾರ ತವರ್ಗಗಳಿಗೆ ಶಕಾರ ಚವರ್ಗಗಳು ಸೇರಿದರೆ ಸಕಾರಕ್ಕೆ ಶಕಾರವೂ ತ ವರ್ಗಕ್ಕೆ ಚವರ್ಗವೂ ಆದೇಶವಾಗಿ ಬರುತ್ತದೆ. ತವರ್ಗದ ಐದಕ್ಷರಗಳಿಗೆ ಚವರ್ಗದ ಐದಕ್ಷರಗಳು ಕ್ರಮವಾಗಿ ಬರುತ್ತವೆ. ಚ ವರ್ಗಕ್ಕೆ 'ಚು' ಎಂದು ಹೆಸರು. ಶ್ + ಚು = ಶ್ಚು.

ಉದಾ: ಯಶಸ್ + ಶರೀರ = ಯಶಶ್ಶರೀರ

ಮನಸ್ + ಚಾಂಚಲ್ಯ = ಮನಶ್ಚಾಂಚಲ್ಯ

ಸತ್ + ಚಿತ್ = ಸಚ್ಚಿತ್

ಸತ್ + ಜನ = ಸಜ್ಜನ

ಹೀಗೆಯೇ ಚಲಚ್ಚಿತ್ರ, ಮನಶ್ಶಾಂತಿ, ಬೃಹಜ್ಜ್ಯೋತಿ ಇತ್ಯಾದಿ.

## ೭. ಷ್ಟುತ್ವಸಂಧಿ

ಸಕಾರ ತವರ್ಗಗಳಿಗೆ ಷಕಾರ ಟವರ್ಗಗಳು ಸೇರಿದರೆ ಸಕಾರಕ್ಕೆ ಷಕಾರವೂ ತವರ್ಗಕ್ಕೆ ಟವರ್ಗವೂ ಆದೇಶವಾಗಿ ಬರುತ್ತವೆ. ಟವರ್ಗಕ್ಕೆ 'ಟು' ಎಂದು ಹೆಸರು. ಷ್ + ಟು = ಷ್ಟು.

ಉದಾ: ತಪಸ್ + ಷಡ್ಭಾಗ = ತಪಷ್ಷಡ್ಭಾಗ

ಧನುಸ್ + ಟಂಕಾರ = ಧನುಷ್ಟಂಕಾರ

ಉತ್ + ಡಯನ = ಉಡ್ಡಯನ

ಬೃಹತ್ + ಟೀಕೆ = ಬೃಹಟ್ಟೀಕೆ

## ೮. ಅನುನಾಸಿಕ ಸಂಧಿ

ಪದಾಂತದಲ್ಲಿರುವ ವರ್ಗೀಯ ವ್ಯಂಜನಕ್ಕೆ ಅನುನಾಸಿಕ ಪರವಾದರೆ ಆ ವರ್ಗದ ಅನುನಾಸಿಕ ಬರುತ್ತದೆ.

ಉದಾ : ವಾಕ್ + ಮಯ = ವಾಙ್ಮಯ ಷಟ್ + ಮುಖ = ಷಣ್ಮುಖ

ಚಿತ್ + ಮಯ = ಚಿನ್ಮಯ ಭಗವತ್+ನಾಮ = ಭಗವನ್ನಾಮ

ಹೀಗೆಯೇ ದಿಙ್ಮೂಢ, ಷಣ್ಮಾಸ, ಹಸನ್ಮುಖ ಇತ್ಯಾದಿ.

ಇನ್ನೂ ಹಲವು ಬಗೆಯ ವ್ಯಂಜನ ಸಂಧಿಗಳು ಸಂಸ್ಕೃತದಲ್ಲಿವೆ. ಕನ್ನಡದಲ್ಲಿ ವಿಶೇಷವಾಗಿ ಬಳಕೆಯಲ್ಲಿರುವ ಕೆಲವನ್ನು ಮುಂದೆ ಕೊಡಲಾಗಿದೆ.

೧. ಸಕಾರಕ್ಕೆ ಶ,ಷ,ಸ ಗಳು ಪರವಾದಾಗ ಕ್ರಮವಾಗಿ ಶ,ಷ,ಸ ಗಳು ವಿಕಲ್ಪವಾಗಿ ಬರುತ್ತವೆ. ಅವು ಬರದಾಗ ವಿಸರ್ಗ ಬರುತ್ತದೆ.

ಮನಸ್ + ಶಾಂತಿ = ಮನಶ್ಶಾಂತಿ (ಇದು ಶ್ಚುತ್ವಸಂಧಿ), ಮನಃಶಾಂತಿ

ತಪಸ್ + ಷಡ್ಭಾಗ = ತಪಷ್ಷಡ್ಭಾಗ ( ಇದು ಷ್ಟುತ್ವ ಸಂಧಿ), ತಪಃಷಡ್ಭಾಗ

ಮನಸ್ + ಸ್ಫೂರ್ತಿ = ಮನಸ್ಸ್ಫೂರ್ತಿ

ಮೇಲ್ಕಂಡ ಶಬ್ದಗಳಲ್ಲಿ ವಿಸರ್ಗವನ್ನು ಬರೆದರೂ ಶ,ಷ,ಸ ಗಳಂತೆಯೇ ಉಚ್ಚರಿಸುವುದು ರೂಢಿಯಲ್ಲಿದೆ.

೨. ತಕಾರದ ಮುಂದಿನ ಶಕಾರವು ಛಕಾರವಾಗುತ್ತದೆ. ಆಮೇಲೆ ತಕಾರಕ್ಕೆ ಶ್ಚುತ್ವಸಂಧಿಯಿಂದ ಚಕಾರ ಬರುತ್ತದೆ.

ಉದಾ: ವಿದ್ಯುತ್ + ಶಕ್ತಿ, ವಿದ್ಯುತ್ಛಕ್ತಿ = ವಿದ್ಯುಚ್ಛಕ್ತಿ

ಸತ್ + ಶಾಸ್ತ್ರ, ಸತ್ಛಾಸ್ತ್ರ = ಸಚ್ಛಾಸ್ತ್ರ

ಉತ್ + ಶೃಂಖಲ, ಉತ್ಛೃಂಖಲ = ಉಚ್ಛೃಂಖಲ

೩. ಪದಾಂತದಲ್ಲಿರುವ 'ಅಸ್' ಎಂಬುದಕ್ಕೆ ವ್ಯಂಜನ ಪರವಾದರೆ ಓಕಾರ ಬರುತ್ತದೆ.

ಉದಾ : ರಜಸ್+ ಗುಣ = ರಜೋಗುಣ ತೇಜಸ್ + ಬಲ = ತೇಜೋಬಲ

ಮನಸ್ + ಜಯ = ಮನೋಜಯ ವಯಸ್ + ವೃದ್ಧ= ವಯೋವೃದ್ಧ

ಯಶಸ್+ ಧರ = ಯಶೋಧರ ಮನಸ್+ರಂಜನೆ = ಮನೋರಂಜನೆ

ತಪಸ್ + ನಿಧಿ = ತಪೋನಿಧಿ ಯಶಸ್+ ಹಾನಿ = ಯಶೋಹಾನಿ

ಆದರೆ ಎಲ್ಲ ವರ್ಗದ ಮೊದಲನೆಯ ಎರಡು ಅಕ್ಷರಗಳೂ ಶ,ಷ,ಸ ಗಳೂ

ಪರವಾದರೆ ಈ ನಿಯಮ ಅನ್ವಯಿಸುವುದಿಲ್ಲ- ಯಶಸ್ಕರ, ಮನಶ್ಚಾಂಚಲ್ಯ, ಮನಸ್ತಾಪ, ರಕ್ಷಃಪತಿ, ತಪಃಸಾಮರ್ಥ್ಯ.

'ಮನಮಂತನ, ಯಶೋಕಾಮನೆ' ಮುಂತಾದವು ಸರಿಯಾದ ಶಬ್ದಗಳಲ್ಲ. 'ಮನೋಮಂಥನ, ಯಶಸ್ಕಾಮನೆ' ಎಂದಿರಬೇಕು.

೪. ಲಕಾರ ಪರವಾದರೆ ಹಿಂದಿನ ತಕಾರಕ್ಕೆ ಲಕಾರ ಬರುವುದು.

ಉದಾ: ತತ್ + ಲೀನ = ತಲ್ಲೀನ

ವಿದ್ಯುತ್ + ಲತೆ = ವಿದ್ಯುಲ್ಲತೆ

ಸತ್ + ಲೇಖನ = ಸಲ್ಲೇಖನ

೫. ಈ ಸಂಧಿ ವಿಶೇಷಗಳನ್ನು ಗಮನಿಸಬೇಕು :

೧.ಉತ್ + ಸ್ಥಾನ = ಉತ್ಥಾನ. ಉತ್ + ಸ್ಥಿತಿ = ಉತ್ಥಿತಿ, ಉತ್ + ಸ್ಥಾಪನೆ = ಉತ್ಥಾಪನೆ.

೨. ಜ್ಯೋತಿರ್ಮಯ, ಧನುರ್ಬಾಣ, ಬಹಿರಂಗ, ಬಹಿರ್ಗಮನ, ಬಹಿಷ್ಕಾರ, ಬಹಿಷ್ಪ್ರಾಕಾರ.

೩. ಅಂತಃಕರಣ, ಅಂತಃಸ್ಥಿತಿ, ಅಂತರಂಗ, ಅಂತರ್ಗತ, ಪ್ರಾತಃಕಾಲ, ಪ್ರಾತರ್ಭಜನೆ, ದ್ವಿರುಚ್ಚಾರಣೆ; ಚತುರ್ಮುಖ.

೪. ನಿರ್ಗತ, ನೀರವ, ನಿಷ್ಕ್ರಿಯೆ, ನಿಷ್ಫಲ, ದುರ್ಜನ, ದುಷ್ಕೃತಿ, ದುಃಸ್ಥಿತಿ.

೫. ಪುನರ್ + ರಚನೆ = ಪುನಾರಚನೆ, ಅಂತರ್ + ರಾಷ್ಟ್ರೀಯ = ಅಂತಾರಾಷ್ಟ್ರೀಯ. ಪುನರ್ರಚನೆ, ಅಂತರಾಷ್ಟ್ರೀಯ ಎಂಬಿವು ಸರಿಯಾದ ಶಬ್ದಗಳಲ್ಲ.

೬. ಸಮ್ + ಕಾರ= ಸಂಸ್ಕಾರ, ಸಂಸ್ಕೃತಿ; ಪುಂಸ್ಕೋಕಿಲ.

೭. ಆ + ಛಾದನೆ = ಆಚ್ಛಾದನೆ, ವೃಕ್ಷ + ಛಾಯೆ=ವೃಕ್ಷಚ್ಛಾಯೆ.

೮. ಯಶಸ್ಕಾಮನೆ, ನಮಸ್ಕಾರ, ತಿರಸ್ಕಾರ, ಪುರಸ್ಕೃತಿ, ಅಯಸ್ಕಾಂತ.

೯. ವಯಸ್ +ಅನುಗುಣ= ವಯೋನುಗುಣ, ತಪೋಭಿಲಾಷೆ, ಛಂದೋಂಬುಧಿ.

೧೦. ಬಿಂಬ + ಓಷ್ಠ = ಬಿಂಬೋಷ್ಠ; ಅಧರೋಷ್ಠ. ಅಧರೌಷ್ಠ.



## ೩. ನಾಮಪದ ಪ್ರಕರಣ

### ವಾಕ್ಯ- ವಾಕ್ಯ ಸ್ವರೂಪ

ಪೂರ್ಣವಾದ ಅರ್ಥವನ್ನು ಕೊಡುವ ಪದಗಳ ಗುಂಪಿಗೆ ವಾಕ್ಯವೆಂದು ಹೆಸರು.

ಉದಾ : ೧. ರಾಮನು ಹಣ್ಣನ್ನು ತಿನ್ನುತ್ತಾನೆ.

೨. ಹಕ್ಕಿ ಮರದಿಂದ ಹಾರಿತು.

೩. ಹುಡುಗನು ತಂದೆಗೆ ಲೇಖನಿಯನ್ನು ಕೊಟ್ಟನು.

೪. ನನ್ನ ಪುಸ್ತಕವನ್ನು ಯಾರು ತೆಗೆದುಕೊಂಡರು ?

೫. ಕೆರೆಯಲ್ಲಿ ನೀರಿದೆ.

ಇವುಗಳಲ್ಲಿ ಒಂದು ಶಬ್ದವನ್ನು ತೆಗೆದರೂ ಅರ್ಥವು ಪೂರ್ಣವಾಗುವುದಿಲ್ಲ. ಅರ್ಥದ ವಿವರಣೆಗಾಗಿ ಬೇಕಾದರೆ ಇನ್ನೂ ಹೆಚ್ಚು ಶಬ್ದಗಳನ್ನು ಸೇರಿಸಬಹುದು.

ಉದಾ: ೧. ರಾಮನು ಈಗ ಮಾವಿನ ಹಣ್ಣನ್ನು ತಿನ್ನುತ್ತಾನೆ.

೨. ಆ ಹಕ್ಕಿ ದೊಡ್ಡ ಮರದಿಂದ ಸರ್ರನೆ ಹಾರಿತು.

ಕೆಲವು ವೇಳೆ ಅರ್ಥದ ಪೂರ್ತಿಗಾಗಿ ಉಚಿತವಾದ ಪದವನ್ನು ಊಹಿಸಿಕೊಳ್ಳ ಬೇಕಾಗುತ್ತದೆ. ಈ ಊಹೆಗೆ 'ಅಧ್ಯಾಹಾರ' ಎಂದು ಹೆಸರು.

ಉದಾ : ೧. ಪೇಟೆಗೆ ಹೋದೆನು. (ನಾನು ಎಂಬುದಕ್ಕೆ ಅಧ್ಯಾಹಾರ)

೨. ಅವನು ಬರೆಯುತ್ತಿದ್ದಾನೆ. (ಲೇಖನಿಯಿಂದ ಎಂಬುದಕ್ಕೆ ಅಧ್ಯಾಹಾರ)

ಕ್ರಿಯಾಪದವಿಲ್ಲದೆ ಅರ್ಥವು ಪೂರ್ಣವಾಗುವುದಿಲ್ಲ. ಅದನ್ನು ಪ್ರಯೋಗಿಸಲೇ ಬೇಕು: 'ಇರು' ಎಂಬ ಧಾತುವಿನಿಂದಾದ ಇದ್ದಾನೆ, ಇದ್ದಾಳೆ, ಇದೆ- ಮುಂತಾದವನ್ನು ಮಾತ್ರ ಪ್ರಯೋಗಿಸದಿದ್ದರೂ ವಾಕ್ಯವಾಗುತ್ತದೆ. ಆದರೆ ಅವುಗಳಿಗೆ ಅಧ್ಯಾಹಾರವಿರುತ್ತದೆ.

| | | ಅಧ್ಯಾಹಾರ |
|---|---|---|
| ಉದಾ: | ಹುಡುಗ ಒಳ್ಳೆಯವನು | (ಇದ್ದಾನೆ- ಆಗಿದ್ದಾನೆ) |
| | ವಿಮಲೆ ಜಾಣೆ | (ಇದ್ದಾಳೆ- ಆಗಿದ್ದಾಳೆ) |
| | ಸಕ್ಕರೆ ಸಿಹಿ | (ಇದೆ - ಆಗಿದೆ) |

## ವಾಕ್ಯ ವಿಭಜನೆ

ವಾಕ್ಯದಲ್ಲಿರುವ ಪದಗಳನ್ನು ನಾಮಪದ, ಕ್ರಿಯಾಪದ, ಅವ್ಯಯ ಎಂದು ಮೂರು ವಿಧದಲ್ಲಿ ವಿಂಗಡಿಸಬಹುದು. ಮುಂದೆ ವಿಭಕ್ತಿ ಪ್ರತ್ಯಯಗಳ ವಿಷಯವನ್ನು ಹೇಳಲಾಗುತ್ತದೆ. ಆ ವಿಭಕ್ತಿ ಪ್ರತ್ಯಯಗಳನ್ನು ಹೊಂದಿರುವ ಪದ ನಾಮಪದ. ಕ್ರಿಯೆಯನ್ನು ಬೋಧಿಸುವ ಪದ ಕ್ರಿಯಾಪದ. ಯಾವ ರೂಪಾಂತರವನ್ನೂ ಹೊಂದದೆ ಒಂದೇ ರೂಪದಲ್ಲಿರುವ ಪದ ಅವ್ಯಯ.

ಉದಾ : ನಾಮಪದ : ರಾಮನು, ಮರದಿಂದ, ಕೆರೆಯಲ್ಲಿ.

ಕ್ರಿಯಾಪದ : ತಿನ್ನುತ್ತಾನೆ, ಹಾರಿತು, ಕೊಟ್ಟನು.

ಅವ್ಯಯ : ಈಗ, ಸರ್ರನೆ, ಮೆಲ್ಲಗೆ.

## ನಾಮಪದ

೧. ನಾಮಪದದ ಮೂಲರೂಪಕ್ಕೆ ಪ್ರಾತಿಪದಿಕ ಅಥವಾ ನಾಮಪ್ರಕೃತಿ ಎಂದೂ ಅದಕ್ಕೆ ಸೇರುವ ಪ್ರತ್ಯಯಕ್ಕೆ ವಿಭಕ್ತಿಯೆಂದೂ ಪ್ರಾತಿಪದಿಕವೂ ವಿಭಕ್ತಿಯೂ ಸೇರಿದ ಶಬ್ದಕ್ಕೆ ನಾಮಪದವೆಂದೂ ಹೆಸರು.

| | **ಪ್ರಾತಿಪಧಿಕ** | **ವಿಭಕ್ತಿ** | **ನಾಮಪದ** |
|---|---|---|---|
| ಉದಾ: | ನೆಲ | ಅನ್ನು | ನೆಲವನ್ನು |
| | ರಾಮ | ಇಂದ | ರಾಮನಿಂದ |
| | ಹೊಳೆ | ಅ | ಹೊಳೆಯ |
| | ಮನೆ | ಅಲ್ಲಿ | ಮನೆಯಲ್ಲಿ |

೨. ಪ್ರಾತಿಪದಿಕವು ವಸ್ತುವಾಚಕ, ಭಾವನಾಮ, ಗುಣವಾಚಕ, ಸಂಖ್ಯಾವಾಚಕ, ಪರಿಮಾಣವಾಚಕ, ಸರ್ವನಾಮ - ಎಂದು ಆರು ವಿಧ. ವಸ್ತುವಾಚಕದಲ್ಲಿ ವಸ್ತುವಿನ ರೂಢವಾದ ಹೆಸರಿಗೆ ರೂಢನಾಮವೆಂದೂ ಅರ್ಥಾನುಸಾರವಾದ ಹೆಸರಿಗೆ ಅನ್ವರ್ಥನಾಮುವೆಂದೂ ಇಷ್ಟಾನುಸಾರವಾಗಿ ನಾವು ಇಟ್ಟಿರುವ ಹೆಸರಿಗೆ ಅಂಕಿತನಾಮವೆಂದೂ ಸಂಜ್ಞೆ.

೧. ವಸ್ತುವಾಚಕ:

ರೂಢನಾಮ: ಅರಸ, ಮರ, ಬಳ್ಳಿ, ಮನುಷ್ಯ.

ಅನ್ವರ್ಥನಾಮ: ಕುರುಡ, ಕುಂಟ, ಹೆಳವ, ಕಿವುಡ.

ಅಂಕಿತನಾಮ : ಬೆಂಗಳೂರು, ಕಾವೇರಿ, ಗೋವಿಂದ, ವೆಂಕಟ.

೨. ಭಾವನಾಮ (Abstract Noun) : ಇದು ವಸ್ತುವಿನಲ್ಲಿರುವ ಒಂದು ಧರ್ಮವನ್ನು ಅಥವಾ ಸ್ವಭಾವವನ್ನು ಹೇಳುತ್ತದೆ. ಬಿಳುಪು, ಕಪ್ಪು, ಓಟ, ನೋಟ.

೩. ಗುಣವಾಚಕ: ಕಿರಿದು, ಹಿರಿದು, ಚಿಕ್ಕದು, ಬಿಳಿಯದು.

೪. ಸಂಖ್ಯಾವಾಚಕ: ಒಂದು, ಎರಡು, ಹತ್ತು, ಒಂದನೆಯದು, ಎರಡನೆಯದು.

೫. ಪರಿಮಾಣವಾಚಕ: ಅಷ್ಟು, ಇಷ್ಟು, ಸ್ವಲ್ಪ, ಸೇರು, ಮಣ.

೬. ಸರ್ವನಾಮ: ನಾಮಪದಗಳಿಗೆ ಬದಲಾಗಿ ಅವನ್ನು ಪ್ರತಿನಿಧಿಸುವ ನಾಮ ಸರ್ವನಾಮ - ಅವನು, ಅವಳು, ಅದು, ಇವನು, ಏನು, ಯಾವನು.

ಪ್ರಾತಿಪದಿಕಗಳ ನಾನಾ ಪ್ರಕಾರಗಳನ್ನು ತೋರಿಸಲು ಸ್ಥೂಲವಾಗಿ ಮೇಲ್ಕಂಡ ವಿಭಾಗವನ್ನು ತೋರಿಸಿದೆ. ಕಾಲವಾಚಕ, ದಿಗ್ವಾಚಕ ಮುಂತಾದ ಇನ್ನೂ ಕೆಲವು ವಿಭಾಗಗಳನ್ನು ಮಾಡಲು ಸಾಧ್ಯವಿದೆ. ರೂಪಸಿದ್ಧಿಗೆ ಈ ವಿಭಾಗದಿಂದ ಹೆಚ್ಚಿನ ಪ್ರಯೋಜನವೇನೂ ಇಲ್ಲ. ಮುಂದಿನ ಪ್ರಕರಣಗಳಲ್ಲಿ ಹೇಳುವ ಕೃದಂತ, ತದ್ಧಿತಾಂತ, ಸಮಾಸಗಳು ಮೇಲಿನ ಪಂಗಡಗಳಲ್ಲಿಯೇ ಸೇರುತ್ತವೆ.

## ಲಿಂಗ

ಕನ್ನಡದಲ್ಲಿ ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗ ಎಂದು ಶಬ್ದದ ಲಿಂಗವು ಮೂರು ತರ. ಗಂಡಸರನ್ನು ಭೋಧಿಸುವ ಶಬ್ದ ಪುಲ್ಲಿಂಗ, ಹೆಂಗಸರನ್ನು ಬೋಧಿಸುವ ಶಬ್ದ ಸ್ತ್ರೀಲಿಂಗ, ಪ್ರಾಣಿಗಳನ್ನೂ ಇತರ ವಸ್ತುಗಳನ್ನೂ ಬೋಧಿಸುವ ಶಬ್ದ ನಪುಂಸಕಲಿಂಗ.

ಪುಲ್ಲಿಂಗ : ಹುಡುಗ, ಒಡೆಯ, ಕುರುಡ, ವೆಂಕಟ.

ಸ್ತ್ರೀಲಿಂಗ : ಹುಡುಗಿ, ಒಡತಿ, ಕುರುಡಿ, ಲಕ್ಷ್ಮಿ.

ನಪುಂಸಕಲಿಂಗ : ಎತ್ತು, ಹಸು, ಮರ, ಬಳ್ಳಿ.

ಕೆಲವು ಶಬ್ದಗಳಿಗೆ ಅನೇಕ ಲಿಂಗಗಳಿರುವುದುಂಟು.

೧. ಗ್ರಹವಾಚಕಗಳು ಪುಂನಪುಂಸಕಗಳು.

ಪುಲ್ಲಿಂಗ : ಸೂರ್ಯನು ಹುಟ್ಟಿದನು; ಇವನು ಶುಕ್ರ.

ನಪುಂಸಕಲಿಂಗ : ಸೂರ್ಯ ಹುಟ್ಟಿತು; ಇದು ಶುಕ್ರ.

೨. ವಸಂತ, ಚೈತ್ರ, ಮಾರುತ ಮೊದಲಾದವು ಪುಂನಪುಂಸಕಗಳು.

ಪುಲ್ಲಿಂಗ : ವಸಂತನು ಆಗಮಿಸಿದನು, ಮಾರುತನು ಬೀಸಿದನು.

ನಪುಂಸಕಲಿಂಗ : ವಸಂತ ಬಂದಿತು, ಮಾರುತ ಬೀಸಿತು.

೩. ಲಕ್ಷ್ಮಿ, ಸರಸ್ವತಿ, ಶ್ರೀ, ವಾಣಿ ಮೊದಲಾದವು ಮತ್ತು ಗಂಗೆ, ಕಾವೇರಿ ಮೊದಲಾದ ನದೀವಾಚಕಗಳು ಸ್ತ್ರೀ ನಪುಂಸಕಗಳು.

ಸ್ತ್ರೀಲಿಂಗ : ಲಕ್ಷ್ಮಿ ಒಲಿದಿದ್ದಾಳೆ, ಸರಸ್ವತಿ ಅನುಗ್ರಹಿಸಿದಳು, ಗಂಗೆ ಹರಿದಳು.

ನಪುಂಸಕಲಿಂಗ : ಲಕ್ಷ್ಮಿ ನೆಲೆಸಿದೆ, ಸರಸ್ವತಿ ಒಲಿಯಿತು, ಕಾವೇರಿ ಹರಿಯುತ್ತದೆ.

೪. ದೇವತೆ ಎಂಬುದು ಮೂರು ಲಿಂಗಗಳಲ್ಲಿಯೂ ಉಂಟು.

ಪುಲ್ಲಿಂಗ : ಶ್ರೀ ಕೃಷ್ಣನು ದೇವತೆ

ಸ್ತ್ರೀಲಿಂಗ : ದೇವತೆ ಒಲಿದಳು.

ನಪುಂಸಕಲಿಂಗ : ದೇವತೆ ಮೆಚ್ಚಿತು

೫. ಜನ ಶಬ್ದ ಪುಂನಪುಂಸಕ. ಬಹುವಚನದಲ್ಲಿ ಪುಲ್ಲಿಂಗ, ಏಕವಚನದಲ್ಲಿ ನಪುಂಸಕ.

ಪುಲ್ಲಿಂಗ : ಜನರು ಹೇಳುತ್ತಾರೆ.

ನಪುಂಸಕ : ಜನ ಬಂದಿದೆ.

ಸಜ್ಜನ, ಸುಜನ, ದುರ್ಜನ, ಕುಜನ, ಮಹಾಜನ - ಇವು ಪುಲ್ಲಿಂಗ

೬. ವಿಶೇಷಣವು ವಿಶೇಷ್ಯದ ಲಿಂಗವನ್ನು ಅನುಸರಿಸುತ್ತದೆ

ಜಾಣನಾದ ಹುಡುಗ, ಜಾಣೆಯಾದ ಹುಡುಗಿ, ಜಾಣವಾದ ನರಿ, ಒಬ್ಬನು ಗಂಡಸು, ಒಬ್ಬಳು ಹೆಂಗಸು, ಒಂದು ಪುಸ್ತಕ.

೭. ನಾನು, ನೀನು, ತಾನು - ಇವುಗಳಿಗೆ ಲಿಂಗವಿಲ್ಲ. ಲಿಂಗವಿದೆಯೆಂದು ಹೇಳುವ ಪಕ್ಷದಲ್ಲಿಯೂ ರೂಪಭೇದವಿಲ್ಲ.

ನಾನು ರಾಮ, ನೀನು ಹೆಂಗಸು.

ಅವನು ತಾನು ಬರುವೆನೆಂದನು, ಅವಳು ತಾನು ಬರುವೆನೆಂದಳು.

೮. ಮಗು, ಕೂಸು, ಶಿಶು ಮತ್ತು ಸಮುದಾಯವಾಚಕವಾದ ದಂಡುಸೇನೆ, ಸಂಘ, ಸಭೆ, ಸರ್ಕಾರ ಮುಂತಾದವು ನಪುಂಸಕ.

ಮಗು ಮಲಗಿದೆ, ಸಭೆ ಎದ್ದಿತು, ಸರ್ಕಾರ ಆಜ್ಞೆ ಮಾಡಿತು.

## ವಚನ

ವಚನವೆಂದರೆ ಸಂಖ್ಯೆಯನ್ನು ಬೋಧಿಸುವ ಪ್ರತ್ಯಯ. ಏಕತ್ವ ಸಂಖ್ಯೆಯನ್ನು ಬೋಧಿಸುವ ಪ್ರತ್ಯಯ ಏಕವಚನ ; ಬಹುತ್ವ ಸಂಖ್ಯೆಯನ್ನು ಬೋಧಿಸುವ ಪ್ರತ್ಯಯ ಬಹುವಚನ. ಒಂದು ಸಂಖ್ಯೆಯನ್ನು ತಿಳಿಸುವಾಗ ಏಕವಚನ, ಒಂದಕ್ಕಿಂತ ಹೆಚ್ಚು ಸಂಖ್ಯೆಯನ್ನು ತಿಳಿಸುವಾಗ ಬಹುವಚನವೂ ಬರುತ್ತದೆ. (ಒಂದು) ಹಸು, (ಎರಡು) ಹಸುಗಳು, (ಮೂರು) ಮನೆಗಳು.

೧. ವ್ಯಕ್ತಿಗಳು ಅನೇಕವಿದ್ದರೂ ಸಮುದಾಯವಾಚಕದ ಮೇಲೆ ಏಕವಚನ ಬರುತ್ತದೆ -

ಸಂಘ, ಸಭೆ, ಸರ್ಕಾರ,- ದಂಡು ಇತ್ಯಾದಿ.

ಸಮುದಾಯಗಳೇ ಅನೇಕವಾದಾಗ ಬಹುವಚನ ಬರುತ್ತದೆ-

ಸಂಘಗಳು, ಸಭೆಗಳು, ಸರ್ಕಾರಗಳು.

೨. ಗೌರವಾರ್ಥದಲ್ಲಿ ಏಕವಚನಕ್ಕೆ ಬದಲು ಬಹುವಚನ ಬರುತ್ತದೆ-

ನನ್ನ ತಂದೆಯವರು ಹೇಳಿದರು. ಹೀಗೆಯೇ ನೀವು, ಗುರುಗಳು ಇತ್ಯಾದಿ.

ಏಕವಚನದ ವಿಭಕ್ತಿ ಪ್ರತ್ಯಯವೇ ಬಹುವಚನದಲ್ಲಿ ಬರುತ್ತದೆ. ಆದರೆ ಬಹುತ್ವ ಸಂಖ್ಯೆಯನ್ನು ಸೂಚಿಸುವುದಕ್ಕಾಗಿ ಪ್ರಾತಿಪದಿಕ ಮತ್ತು ವಿಭಕ್ತಿಯ ನಡುವೆ ಕೆಲವು ಪ್ರತ್ಯಯಗಳು ಬರುತ್ತವೆ. ಅವು ಯಾವುವೆಂದರೆ -

೧. ಪುಲ್ಲಿಂಗ ಸ್ತ್ರೀಲಿಂಗಗಳಲ್ಲಿ ಪ್ರಾತಿಪದಿಕಗಳಿಗೆ 'ಅರು' ಪ್ರತ್ಯಯವೂ ನಪುಂಸಕಲಿಂಗದಲ್ಲಿ 'ಗಳು' ಪ್ರತ್ಯಯವೂ ಬರುತ್ತವೆ.

ಪು. ಗಂಡಸರು, ಹುಡುಗರು

ಸ್ತ್ರೀ. ಹೆಂಗಸರು, ಹುಡುಗಿಯರು

ನ. ಎತ್ತುಗಳು, ಮರಗಳು.

೨. ಅಕಾರಾಂತ ಬಂಧುವಾಚಕಗಳಿಗೆ ‘ಅಂದಿರು’ -

ಅಣ್ಣಂದಿರು, ತಮ್ಮಂದಿರು, ಮಾವಂದಿರು, ಅಕ್ಕಂದಿರು.

೩. ಅಕಾರಾಂತವಲ್ಲದ ಬಂಧುವಾಚಕಗಳಿಗೆ ಅರು, ಅವರು -

ತಾಯಿಯರು, ತಾಯಿಯವರು; ತಂದೆಯರು, ತಂದೆಯವರು; ಅತ್ತೆಯರು, ಅತ್ತೆಯವರು; ಸೊಸೆಯರು, ಸೊಸೆಯವರು; ತಾಯಂದಿರು, ಸೊಸೆಯಂದಿರು, ತಂದೆತಾಯಿಗಳು, ತಾಯಿ ತಂದೆಗಳು ಎಂಬ ರೂಪಗಳೂ ಉಂಟು.

೪. ಪುಲ್ಲಿಂಗ ಸ್ತ್ರೀಲಿಂಗಗಳಲ್ಲಿಯೂ ‘ಗಳು’ ಪ್ರತ್ಯಯ ಬರುವುದುಂಟು- ಗುರುಗಳು, ಜ್ಞಾನಿಗಳು, ಹೆಣ್ಣುಗಳು, ಗಂಡುಗಳು.

೫. ‘ಅರು’ ಮೊದಲಾದ ಬಹುವಚನಪ್ರತ್ಯಯಗಳ ಮೇಲೂ ‘ಗಳು’ ಬರುವುದುಂಟು. ಎಂದರೆ ಎರಡು ಬಹುವಚನಪ್ರತ್ಯಯಗಳು ಒಂದರಮೇಲೊಂದು ಕೆಲವೆಡೆ ಬರುತ್ತವೆ -

ತಾಯಿಯರುಗಳು, ಅಣ್ಣಂದಿರುಗಳು, ವಿದ್ವಾಂಸರುಗಳು.

೬. ಮಗನು, ಮಗಳು, ಮಗು ಎಂಬ ಶಬ್ದಗಳಿಗೆ ಮೂರು ಲಿಂಗಗಳಲ್ಲಿಯೂ ಮಕ್ಕಳು ಎಂಬುದು ಬಹುವಚನ. ಮಕ್ಕಳುಗಳು ಎನ್ನುವುದೂ ಉಂಟು.

೭. ‘ಹೆಂಡತಿ’ ಶಬ್ದಕ್ಕೆ ಬಹುವಚನದಲ್ಲಿ ಹೆಂಡತಿಯರು, ಹೆಂಡಿರು- ಎಂಬ ಎರಡು ರೂಪಗಳು ಹೊಸಗನ್ನಡದಲ್ಲಿವೆ.

೮. ಕೆಲವು ಗುಣವಾಚಕ, ಸಂಖ್ಯಾವಾಚಕ ಮತ್ತು ಸರ್ವನಾಮಗಳಿಗೆ ಏಕವಚನ-ಬಹುವಚನಗಳಲ್ಲಾಗುವ ನಿಷ್ಪನ್ನ ರೂಪಗಳು ಯಾವುವೆಂದರೆ :

**೧. ಗುಣವಾಚಕ**

ಅ

| ಪು | ಸ್ತ್ರೀ | ನ |
|---|---|---|
| ದೊಡ್ಡವನು- ದೊಡ್ಡವರು, | ದೊಡ್ಡವಳು-ದೊಡ್ಡವರು, | ದೊಡ್ಡದು-ದೊಡ್ಡವು |
| ಚಿಕ್ಕವನು- ಚಿಕ್ಕವರು | ಚಿಕ್ಕವಳು- ಚಿಕ್ಕವರು | ಚಿಕ್ಕದು-ಚಿಕ್ಕವು |

ಹೀಗೆಯೇ ಒಳ್ಳೆಯವನು, ಕೆಟ್ಟವನು ಮೊದಲಾದವು.

ಆ

| | | | | | |
|---|---|---|---|---|---|
| ಹಿರಿಯವನು<br>ಹಿರಿಯನು | ಹಿರಿಯರು | ಹಿರಿಯವಳು<br>ಹಿರಿಯಳು | ಹಿರಿಯರು | ಹಿರಿಯರು<br>ಹಿರಿದು | ಹಿರಿಯವು |

ಹೀಗೆಯೇ ಬಿಳಿಯವನು, ಕಿರಿಯವನು, ಎಳೆಯವನು ಮೊದಲಾದವು.

ಇ

ಇನಿಯನು- ಇನಿಯರು ಇನಿಯಳು-ಇನಿಯರು ಇನಿಯದು- ಇನಿಯವು

ಹಳಬನು- ಹಳಬರು ಹಳಬಳು-ಹಳಬರು ಹಳೆಯದು- ಹಳೆಯವು

ಈ

ಹೊಸಬನು- ಹೊಸಬರು ಹೊಸಬಳು-ಹೊಸಬರು ಹೊಸದು-ಹೊಸವು

| ಪು | ಸ್ತ್ರೀ | ನ |
|---|---|---|
| ಹಲವರು | ಹಲವರು | ಹಲವು |
| ಕೆಲವರು | ಕೆಲವರು | ಕೆಲವು |
| ಎಲ್ಲರು<br>ಎಲ್ಲವರು | ಎಲ್ಲರು<br>ಎಲ್ಲವರು | ಎಲ್ಲವು |

ನಪುಂಸಕಲಿಂಗದಲ್ಲಿ 'ಎಲ್ಲದು' ಎಂಬ ಏಕವಚನ ರೂಢಿಯಲ್ಲಿದೆ.

ಉದಾ: ಎಲ್ಲದೂ ಸರಿಯಾಗಿದೆ.

**೨. ಸಂಖ್ಯಾವಾಚಕ**

| ಪು | ಸ್ತ್ರೀ | ನ |
|---|---|---|
| ಒಬ್ಬನು | ಒಬ್ಬಳು | ಒಂದು |
| ಇಬ್ಬರು, ಈರ್ವರು | ಇಬ್ಬರು, ಈರ್ವರು | ಎರಡು |
| ಮೂವರು, ಮೂರ್ವರು | ಮೂವರು, ಮೂರ್ವರು | ಮೂರು |
| ನಾಲ್ವರು | ನಾಲ್ವರು | ನಾಲ್ಕು |
| ಐವರು | ಐವರು | ಐದು |

ಹೀಗೆಯೇ ಆರ್ವರು, ಏಳ್ವರು, ನೂರ್ವರು. ಉಳಿದ ಸಂಖ್ಯಾವಾಚಕಗಳಿಗೆ ಪುಂ ಸ್ತ್ರೀ ಲಿಂಗಗಳಲ್ಲಿ ನಾಮಪದಗಳಂತೆ ಸ್ವತಂತ್ರ ಪ್ರಯೋಗವಿಲ್ಲ. ನಪುಂಸಕ ಲಿಂಗದಲ್ಲಿ ಮಾತ್ರ ಸ್ವತಂತ್ರ ಪ್ರಯೋಗವಿದೆ.

ಉದಾ: ಹಸುಗಳಲ್ಲಿ ಹನ್ನೆರಡು ಮೇಯಲು ಹೋದವು. ಮನೆಗಳಲ್ಲಿ ಇಪ್ಪತ್ತು ಹೊಸದಾಗಿ ಕಟ್ಟಿದವು.

ಹೀಗೆ ಪುಲ್ಲಿಂಗ ಸ್ತ್ರೀಲಿಂಗಗಳಲ್ಲಿ ಪ್ರಯೋಗವಿಲ್ಲ.

ವಿಶೇಷ : ೧. ಮೇಲ್ಕಂಡ ಸಂಖ್ಯಾವಾಚಕಗಳು ಬರಿಯ ವಿಶೇಷಣಗಳಾದಾಗ 'ಇಬ್ಬರು ಹುಡುಗರು- ಎರಡು ಹುಡುಗರು, ನಾಲ್ವರು ಹೆಂಗಸರು- ನಾಲ್ಕು ಹೆಂಗಸರು' ಮುಂತಾದ ಪ್ರಯೋಗಗಳೂ ಉಂಟು.

೨. ಗೌರವಾರ್ಥದಲ್ಲಿಯೂ 'ಕೆಲವರು' ಎಂಬ ಅರ್ಥದಲ್ಲಿಯೂ 'ಒಬ್ಬರು' ಎಂಬ ಬಹುವಚನವಿದೆ.

ಉದಾ : (ಗೌರವಾರ್ಥದಲ್ಲಿ) ನೀವು ಒಬ್ಬರು; (ಕೆಲವರು ಎಂಬ ಅರ್ಥದಲ್ಲಿ) ಒಬ್ಬರು ಹಾಗೆ ಒಬ್ಬರು ಹೀಗೆ.

**೧. ಸರ್ವನಾಮ**

| ಪುಲ್ಲಿಂಗ | | ಸ್ತ್ರೀಲಿಂಗ | | ನಪುಂಸಕಲಿಂಗ | |
|---|---|---|---|---|---|
| ಏಕ. | ಬಹು. | ಏಕ. | ಬಹು | ಏಕ. | ಬಹು |
| ಅವನು | ಅವರು | ಅವಳು | ಅವರು | ಅದು | ಅವು |
| ಆತನು | ಇವರು | ಆಕೆ | " | | |
| ಇವನು | ಇವರು | ಇವಳು | ಇವರು | ಇದು | ಇವು |
| ಇತನು | " | ಈಕೆ | " | | |
| ಯಾವನು | ಯಾರು | ಯಾವಳು | ಯಾರು | ಯಾವುದು | ಯಾವುದು |
| ತಾನು | ತಾವು | ತಾನು | ತಾವು | ತಾನು | ತಾವು |
| ನೀನು | ನೀವು | ನೀನು | ನೀವು | ನೀನು | ನೀವು |
| ನಾನು | ನಾವು | ನಾನು | ನಾವು | ನಾನು | ನಾವು |

ವಿಶೇಷ : ಯಾವುದು, ಯಾವುವು - ಎಂಬ ಶಬ್ದಗಳನ್ನು ಯಾವದು, ಯಾವವು ಎಂದೂ ಬಳಸುವುದುಂಟು. ಯಾರು- ಎಂಬ ಶಬ್ದಕ್ಕೆ ಏಕವಚನದಲ್ಲಿಯೂ ಪ್ರಯೋಗವಿದೆ. ಉದಾ : ಯಾರು ಹೇಳಿದವನು?

## ವಿಭಕ್ತಿ

ನಾಮಪದದಲ್ಲಿ ಪ್ರಾತಿಪದಿಕದ ಮುಂದೆ ವಿಭಕ್ತಿಪ್ರತ್ಯಯವು ಸೇರಿರುತ್ತದೆ. ಅರ್ಥ ವಿಶೇಷವನ್ನು ವಿಭಾಗಿಸಿ ತಿಳಿಸುವುದರಿಂದ ಈ ಪ್ರತ್ಯಯಕ್ಕೆ ವಿಭಕ್ತಿ ಎಂದು ಸಂಜ್ಞೆ. ವಿಭಕ್ತಿಗಳಲ್ಲಿ ಕೆಳಗೆ ಕಾಣಿಸಿದಂತೆ ಎಂಟು ಪ್ರಕಾರಗಳಿವೆ. ಸಂಬೋಧನ ವಿಭಕ್ತಿಯನ್ನು

ಪ್ರಥಮಾ ವಿಭಕ್ತಿಯಲ್ಲಿ ಸೇರಿಸಿ ಏಳು ವಿಭಕ್ತಿಗಳೆಂದು ಹೇಳುತ್ತಾರೆ. ಕನ್ನಡದಲ್ಲಿ ಏಕವಚನ ಬಹುವಚನಗಳೆರಡರಲ್ಲಿಯೂ ಒಂದೇ ವಿಭಕ್ತಿ ಬರುತ್ತದೆ. ಬಹುವಚನದಲ್ಲಿ ಪ್ರಾತಿಪದಿಕ ಮತ್ತು ವಿಭಕ್ತಿ ಪ್ರತ್ಯಯಗಳ ನಡುವೆ ಬಹುವಚನದ ಸೂಚನೆಗಾಗಿ ಕೆಲವು ವಿಕರಣ ಪ್ರತ್ಯಯಗಳು ಬರುತ್ತವೆ.

| ವಿಭಕ್ತಿ | ಪ್ರತ್ಯಯ |
|---|---|
| ಪ್ರಥಮಾ | ಉ |
| ಸಂಬೋಧನಾ ಪ್ರಥಮಾ | ಏ, ಇರ |
| ದ್ವಿತೀಯಾ | ಅನ್ನು |
| ತೃತೀಯಾ | ಇಂದ |
| ಚತುರ್ಥೀ | ಇಗೆ, ಗೆ, ಕ್ಕೆ, ಅಕ್ಕೆ |
| ಪಂಚಮೀ | ದೆಸೆಯಿಂದ, ಇಂದ |
| ಷಷ್ಠೀ | ಅ |
| ಸಪ್ತಮೀ | ಅಲ್ಲಿ |

ಪ್ರಾತಿಪದಿಕಗಳಿಗೆ ವಿಭಕ್ತಿ ಪ್ರತ್ಯಯವು ಸೇರುವಾಗ ಲೋಪ, ಆಗಮ, ಆದೇಶಗಳು ವಿವಿಧವಾಗಿ ಬರುತ್ತದೆ. ಪುಲ್ಲಿಂಗ ಸ್ತ್ರೀಲಿಂಗಗಳಲ್ಲಿ ಇವು ಒಂದೇ ಬಗೆಯವು. ನಪುಂಸಕದಲ್ಲಿ ಬೇರೆ ಬಗೆಯವು. ಮುಂದೆ ಕೆಲವು ನಿಷ್ಪನ್ನ ರೂಪಗಳನ್ನು ಬರೆಯಲಾಗಿದೆ. ಆದರಂತೆ ಉಳಿದ ಶಬ್ದಗಳ ರೂಪಗಳನ್ನು ಊಹಿಸಿಕೊಳ್ಳಬಹುದು.

## ೧. ಪುಲ್ಲಿಂಗ- ಸ್ತ್ರೀಲಿಂಗ

### ೧. ಅಕಾರಾಂತ ಪುಲ್ಲಿಂಗ ಹುಡುಗ ಶಬ್ದ

| | | |
|---|---|---|
| ಪ್ರಥಮಾವಿಭಕ್ತಿ | ಹುಡುಗನು, ಹುಡುಗ | ಹುಡುಗರು |
| ಸಂಭೋಧನ ಪ್ರಥಮಾ ವಿಭಕ್ತಿ | ಹುಡುಗನೆ, ಹುಡುಗ | ಹುಡುಗರೆ, ಹುಡುಗರಿರ |
| ದ್ವಿತೀಯಾ | ಹುಡುಗನನ್ನು | ಹುಡುಗರನ್ನು |
| ತೃತೀಯಾ | ಹುಡುಗನಿಂದ | ಹುಡುಗರಿಂದ |
| ಚತುರ್ಥೀ | ಹುಡುಗನಿಗೆ | ಹುಡುಗರಿಗೆ |
| ಪಂಚಮೀ | ಹುಡುಗನ ದೆಸೆಯಿಂದ, ಹುಡುಗನಿಂದ | ಹುಡುಗರ ದೆಸೆಯಿಂದ ಹುಡುಗರಿಂದ |
| ಷಷ್ಠೀ | ಹುಡುಗನ | ಹುಡುಗರ |
| ಸಪ್ತಮೀ | ಹುಡುಗನಲ್ಲಿ | ಹುಡುಗರಲ್ಲಿ |

ಹೀಗೆಯೇ ಒಕ್ಕಲಿಗ, ರಾಮ, ವೆಂಕಟ, ಅರಸ ಇತ್ಯಾದಿ.

ವಿಶೇಷ : ೧. ಸಕಲ ಶಬ್ದಗಳಿಗೂ ಪ್ರಥಮಾ ವಿಭಕ್ತಿ ಏಕವಚನದಲ್ಲಿ 'ಉ' ಪ್ರತ್ಯಯವನ್ನು ಸೇರಿಸದೆ ಬಳಸುವುದು ಹೊಸಗನ್ನಡದಲ್ಲಿ ರೂಢಿಗೆ ಬಂದಿದೆ- ಹುಡುಗ, ರಾಮ, ಕವಿ, ಕಿವಿ, ಗುರು, ಕಟ್ಟಿಗೆ.

೨. ಸಂಬೋಧನದಲ್ಲಿ ಎಲ್ಲ ನಾಮಪದಗಳ ಕಡೆಯ ಸ್ವರವು ವಿಕಲ್ಪವಾಗಿ ದೀರ್ಘವಾಗುತ್ತದೆ- ಹುಡುಗನೇ, ಹುಡುಗಾ,ಹುಡುಗರಿರಾ, ಮರೀ, ಮಗೂ.

೩. ಚತುರ್ಥೀ ವಿಭಕ್ತಿಯ ಮುಂದೆ 'ಓಸ್ಕರ' ಎಂಬ ಪ್ರತ್ಯಯವನ್ನು ಸೇರಿಸುವುದುಂಟು. ಹುಡುಗನಿಗೋಸ್ಕರ, ಅವರಿಗೋಸ್ಕರ, ನನಗೋಸ್ಕರ, ಅದಕ್ಕೋಸ್ಕರ.

೪. ಪಂಚಮೀವಿಭಕ್ತಿಯಲ್ಲಿ 'ದೆಸೆಯಿಂದ' ಎಂಬುದರ ಬಳಕೆ ಕಡಿಮೆಯಾಗಿ ಅದೇ ಅರ್ಥದಲ್ಲಿ 'ಇಂದ' ಎಂಬ ಪ್ರತ್ಯಯವು ರೂಢಿಗೆ ಬಂದಿದೆ. ಆದ್ದರಿಂದ ಮುಂದಿನ ನಾಮಪದ ರೂಪಗಳ 'ದೆಸೆಯಿಂದ' ಎಂಬುದನ್ನು ಕೈಬಿಡಲಾಗಿದೆ. ಷಷ್ಠೀ ವಿಭಕ್ತಿಯ ಮುಂದೆ ಅದನ್ನು ಸೇರಿಸಿಕೊಂಡರೆ, ಪಂಚಮೀವಿಭಕ್ತಿಯ ಇನ್ನೊಂದು ರೂಪವಾಗುವುದು.

೨. ಅಕಾರಾಂತ- ಅಣ್ಣ

| | ಏ.ವ | ಬ.ವ. |
|---|---|---|
| ಪ್ರ. | ಅಣ್ಣನು ಅಣ್ಣ | ಅಣ್ಣಂದಿರು |
| ಸಂ. | ಅಣ್ಣನೆ, ಅಣ್ಣ | ಅಣ್ಣಂದಿರೆ, ಅಣ್ಣಂದಿರ, ಅಣ್ಣಂದಿರಿರ |
| ದ್ವಿ. | ಅಣ್ಣನನ್ನು | ಅಣ್ಣಂದಿರನ್ನು |
| ತೃ. | ಅಣ್ಣನಿಂದ | ಅಣ್ಣಂದಿರಿಂದ |
| ಚ. | ಅಣ್ಣನಿಗೆ | ಅಣ್ಣಂದಿರಿಗೆ |
| ಪಂ. | ಅಣ್ಣನಿಂದ | ಅಣ್ಣಂದಿರಿಂದ |
| ಷ. | ಅಣ್ಣನ | ಅಣ್ಣಂದಿರ |
| ಸ. | ಅಣ್ಣನಲ್ಲಿ | ಅಣ್ಣಂದಿರಲ್ಲಿ |

ಹೀಗೆಯೇ ತಮ್ಮ, ಮಾವ, ಭಾವ ಇತ್ಯಾದಿ. ಸ್ತ್ರೀಲಿಂಗದ ಅಕ್ಕ, ಅಮ್ಮ ಶಬ್ದಗಳೂ ಹೀಗೆಯೇ. ಈ ಶಬ್ದಗಳಿಗೆ ಬಹುವಚನದಲ್ಲಿ 'ಗಳು' ಪ್ರತ್ಯಯವನ್ನು ಸೇರಿಸಿದಾಗ ಅಣ್ಣಂದಿರುಗಳು, ಅಣ್ಣಂದಿರುಗಳೆ- ಅಣ್ಣಂದಿರುಗಳಿರ, ಅಣ್ಣಂದಿರುಗಳನ್ನು ಮುಂತಾದ ರೂಪಗಳಾಗುತ್ತವೆ. ಇಲ್ಲಿ ಬಹುತ್ವವನ್ನು ಸೂಚಿಸಲು ಎರಡು ಪ್ರತ್ಯಯಗಳು ಸೇರಿವೆಯೆಂಬುದನ್ನು ಗಮನಿಸಬೇಕು.

೩. ಇಕಾರಾಂತ- ಕವಿ

| | ಏ.ವ. | ಬ.ವ. |
|---|---|---|
| ಪ್ರ. | ಕವಿಯು, ಕವಿ | ಕವಿಗಳು |
| ಸಂ. | ಕವಿಯೆ, ಕವಿ | ಕವಿಗಳೆ |
| ದ್ವಿ. | ಕವಿಯನ್ನು | ಕವಿಗಳನ್ನು |
| ತೃ. | ಕವಿಯಿಂದ | ಕವಿಗಳಿಂದ |
| ಚ. | ಕವಿಗೆ | ಕವಿಗಳಿಗೆ |
| ಪಂ. | ಕವಿಯಿಂದ | ಕವಿಗಳಿಂದ |
| ಷ. | ಕವಿಯ | ಕವಿಗಳ |
| ಸ. | ಕವಿಯಲ್ಲಿ | ಕವಿಗಳಲ್ಲಿ |

ಹೀಗೆಯೇ ಪತಿ, ಯತಿ ಮೊದಲಾದ ಪುಲ್ಲಿಂಗ ಶಬ್ದಗಳು.

೪. ಇಕಾರಾಂತ ಸ್ತ್ರೀಲಿಂಗ - ಹುಡುಗಿ

| | ಏ.ವ | ಬ.ವ |
|---|---|---|
| ಪ್ರ. | ಹುಡುಗಿಯು, ಹುಡುಗಿ | ಹುಡುಗಿಯರು |
| ಸಂ. | ಹುಡುಗಿಯೆ, ಹುಡುಗಿ | ಹುಡುಗಿಯರೆ, ಹುಡುಗಿಯರಿರ |
| ದ್ವಿ. | ಹುಡುಗಿಯನ್ನು | ಹುಡುಗಿಯರನ್ನು |
| ತೃ. | ಹುಡುಗಿಯಿಂದ | ಹುಡುಗಿಯರಿಂದ |
| ಚ. | ಹುಡುಗಿಗೆ | ಹುಡುಗಿಯರಿಗೆ |
| ಪಂ. | ಹುಡುಗಿಯಿಂದ | ಹುಡುಗಿಯರಿಂದ |
| ಷ. | ಹುಡುಗಿಯ | ಹುಡುಗಿಯರ |
| ಸ. | ಹುಡುಗಿಯಲ್ಲಿ | ಹುಡುಗಿಯರಲ್ಲಿ |

ಹೀಗೆಯೇ ಪತ್ನಿ, ಪುತ್ರಿ, ಲಕ್ಷ್ಮಿ, ಸರಸ್ವತಿ, ಅಜ್ಜಿ ಮುಂತಾದ ಸ್ತ್ರೀಲಿಂಗ ಶಬ್ದಗಳು.

ವಿಶೇಷ : ೧. ಇಕಾರಾಂತ ಸ್ತ್ರೀಲಿಂಗಕ್ಕೆ ಬಹುವಚನದಲ್ಲಿ 'ಅರು' ಎಂಬುದು ನಡುವೆ ಸೇರುತ್ತದೆ.

೨. ಮಂತ್ರಿ, ಪ್ರಧಾನಿ, ಅಧಿಕಾರಿ- ಮುಂತಾದ ಕೆಲವು ಶಬ್ದಗಳು ಪುಲ್ಲಿಂಗ-ಸ್ತ್ರೀಲಿಂಗಗಳೆರಡರಲ್ಲಿಯೂ ಬಳಕೆಗೆ ಬಂದಿವೆ. ಅವುಗಳಿಗೆ ಎರಡು ಲಿಂಗಗಳಲ್ಲಿಯೂ 'ಗಳು' ಪ್ರತ್ಯಯ ಬರುತ್ತದೆ- ಮಂತ್ರಿಗಳು, ಪ್ರಧಾನಿಗಳಿಂದ.

೫. ಈಕಾರಾಂತ ಸ್ತ್ರೀಲಿಂಗ- ಸ್ತ್ರೀ

| | ಏ.ವ. | ಬ.ವ. |
|---|---|---|
| ಪ್ರ. | ಸ್ತ್ರೀಯು, ಸ್ತ್ರೀ | ಸ್ತ್ರೀಯರು |
| ಸಂ. | ಸ್ತ್ರೀಯೆ, ಸ್ತ್ರೀ | ಸ್ತ್ರೀಯರೆ |
| ದ್ವಿ. | ಸ್ತ್ರೀಯನ್ನು | ಸ್ತ್ರೀಯರನ್ನು |
| ತೃ. | ಸ್ತ್ರೀಯಿಂದ | ಸ್ತ್ರೀಯರಿಂದ |
| ಚ. | ಸ್ತ್ರೀ ಗೆ | ಸ್ತ್ರೀಯರಿಗೆ |
| ಪಂ. | ಸ್ತ್ರೀಯಿಂದ | ಸ್ತ್ರೀಯರಿಂದ |
| ಷ. | ಸ್ತ್ರೀಯ | ಸ್ತ್ರೀಯರ |
| ಸ. | ಸ್ತ್ರೀಯಲ್ಲಿ | ಸ್ತ್ರೀಯರಲ್ಲಿ |

ಹೀಗೆಯೇ ಶ್ರೀ, ಹ್ರೀ. ಉಳಿದ ಈಕಾರಾಂತ ಸಂಸ್ಕೃತ ಶಬ್ದಗಳು ಸಾಮಾನ್ಯವಾಗಿ ಕನ್ನಡದಲ್ಲಿ ಇಕಾರಾಂತವಾಗುತ್ತವೆ- ಲಕ್ಷ್ಮೀ-ಲಕ್ಷ್ಮಿ, ನಾರೀ- ನಾರಿ.

೬. ಉಕಾರಾಂತ -ಗುರು

| | ಏ.ವ | ಬ.ವ. |
|---|---|---|
| ಪ್ರ. | ಗುರುವು, ಗುರು | ಗುರುಗಳು |
| ಸಂ. | ಗುರುವೆ, ಗುರು | ಗುರುಗಳೆ |
| ದ್ವಿ. | ಗುರುವನ್ನು | ಗುರುಗಳನ್ನು |
| ತೃ. | ಗುರುವಿಂದ, ಗುರುವಿನಿಂದ | ಗುರುಗಳಿಂದ |
| ಚ. | ಗುರುವಿಗೆ | ಗುರುಗಳಿಗೆ |
| ಪಂ. | ಗುರುವಿಂದ, ಗುರುವಿನಿಂದ | ಗುರುಗಳಿಂದ |
| ಷ. | ಗುರುವಿನ | ಗುರುಗಳ |
| ಸ. | ಗುರುವಲ್ಲಿ, ಗುರುವಿನಲ್ಲಿ | ಗುರುಗಳಲ್ಲಿ |

ಹೀಗೆಯೇ ರಾಮು, ವಧು ಇತ್ಯಾದಿ.

೭. ಉಕಾರಾಂತ ಸರ್ವನಾಮ- ಇವನು. ಸಾಮಾನ್ಯವಾಗಿ ಸರ್ವನಾಮಗಳಿಗೆ ಸಂಬೋಧನ ವಿಭಕ್ತಿ ಇಲ್ಲ.

| | ಏ.ವ. | ಬ.ವ |
|---|---|---|
| ಪ್ರ. | ಇವನು | ಇವರು |
| ಸಂ. | (ಇವನೆ) | (ಇವರೆ) |
| ದ್ವಿ. | ಇವನನ್ನು | ಇವರನ್ನು |

| | | |
|---|---|---|
| ತೃ. | ಇವನಿಂದ | ಇವರಿಂದ |
| ಚ. | ಇವನಿಗೆ | ಇವರಿಗೆ |
| ಪಂ. | ಇವನಿಂದ | ಇವರಿಂದ |
| ಷ. | ಇವನ | ಇವರ |
| ಸ. | ಇವನಲ್ಲಿ | ಇವರಲ್ಲಿ |

ಹೀಗೆಯೇ ಇವಳು, ಅವನು, ಅವಳು.

ವಿಶೇಷ : ಈ ಶಬ್ದಗಳಿಗೆ ಏಕವಚನದಲ್ಲಿ ಕೆಳಗೆ ಕಂಡಂತೆ ರೂಪಾಂತರಗಳುಂಟು.

| | | ಏ.ವ. |
|---|---|---|
| ಪು. | ಇವನು | ಈತನು |
| ಪು. | ಅವನು | ಆತನು |
| ಸ್ತ್ರೀ. | ಇವಳು | ಈಕೆ |
| ಸ್ತ್ರೀ. | ಅವಳು | ಆಕೆ |

೮. ಉಕಾರಾಂತ ಪುಲ್ಲಿಂಗ ಸರ್ವನಾಮ - ಈತನು.

| | ಏ.ವ. | |
|---|---|---|
| ಪ್ರ. | ಈತನು, ಈತ | ಬಹುವಚನದಲ್ಲಿ 'ಇವರು' ರೂಪದಂತೆ. |
| ದ್ವಿ. | ಈತನನ್ನು | |
| ತೃ. | ಈತನಿಂದ | |
| ಚ. | ಈತನಿಗೆ | |
| ಪಂ. | ಈತನಿಂದ | |
| ಷ. | ಈತನ | |
| ಸ. | ಈತನಲ್ಲಿ | |

ಹೀಗೆಯೇ 'ಆತನು' ಬಹುವಚನದಲ್ಲಿ 'ಅವರು' ರೂಪದಂತೆ.

೯. ಎಕಾರಾಂತ ಸ್ತ್ರೀಲಿಂಗ ಸರ್ವನಾಮ - ಈಕೆ

| | ಏ.ವ. | |
|---|---|---|
| ಪ್ರ. | ಈಕೆಯು, ಈಕೆ | ಬಹುವಚನದಲ್ಲಿ 'ಇವರು' ರೂಪದಂತೆ |
| ದ್ವಿ. | ಈಕೆಯನ್ನು | |
| ತೃ. | ಈಕೆಯಿಂದ | |

ಚ. ಈಕೆಗೆ
ಪಂ. ಈಕೆಯಿಂದ
ಷ. ಈಕೆಯ
ಸ. ಈಕೆಯಲ್ಲಿ

ಹೀಗೆಯೇ 'ಆಕೆ' ಬಹುವಚನದಲ್ಲಿ 'ಅವರು' ರೂಪದಂತೆ.

ನಾನು, ನೀನು, ತಾನು..... ಇವುಗಳಿಗೆ ಮೂರು ಲಿಂಗಗಳಲ್ಲಿಯೂ ಒಂದೇ ರೂಪವಿರುತ್ತದೆ.

೧೦. ಉಕಾರಾಂತ ಸರ್ವನಾಮ - ನಾನು

| | ಏ.ವ | ಬ.ವ. |
|---|---|---|
| ಪ್ರ. | ನಾನು | ನಾವು, ನಾವುಗಳು |
| ದ್ವಿ. | ನನ್ನನ್ನು | ನಮ್ಮನ್ನು |
| ತೃ. | ನನ್ನಿಂದ | ನಮ್ಮಿಂದ |
| ಚ. | ನನಗೆ | ನಮಗೆ |
| ಪಂ. | ನನ್ನಿಂದ | ನಮ್ಮಿಂದ |
| ಷ. | ನನ್ನ | ನಮ್ಮ |
| ಷ. | ನನ್ನಲ್ಲಿ | ನಮ್ಮಲ್ಲಿ |

೧೧. ಉಕಾರಾಂತ ಸರ್ವನಾಮ..... ನೀನು

| | ಏ.ವ. | ಬ.ವ. |
|---|---|---|
| ಪ್ರ. | ನೀನು | ನೀವು, ನೀವುಗಳು |
| ದ್ವಿ. | ನಿನ್ನನ್ನು | ನಿಮ್ಮನ್ನು |
| ತೃ. | ನಿನ್ನಿಂದ | ನಿಮ್ಮಿಂದ |
| ಚ. | ನಿನಗೆ | ನಿಮಗೆ |
| ಪಂ. | ನಿನ್ನಿಂದ | ನಿಮ್ಮಿಂದ |
| ಷ. | ನಿನ್ನ | ನಿಮ್ಮ |
| ಸ. | ನಿನ್ನಲ್ಲಿ | ನಿಮ್ಮಲ್ಲಿ |

೧೨. ಉಕಾರಾಂತ ಸರ್ವನಾಮ - ತಾನು

| | ಏ.ವ. | ಬ.ವ. |
|---|---|---|
| ಪ್ರ. | ತಾನು | ತಾವು, ತಾವುಗಳು |
| ದ್ವಿ. | ತನ್ನನ್ನು | ತಮ್ಮನ್ನು |

| | | |
|---|---|---|
| ತೃ. | ತನ್ನಿಂದ | ತಮ್ಮಿಂದ |
| ಚ. | ತನಗೆ | ತಮಗೆ |
| ಪಂ. | ತನ್ನಿಂದ | ತಮ್ಮಿಂದ |
| ಷ. | ತನ್ನ | ತಮ್ಮ |
| ಸ. | ತನ್ನಲ್ಲಿ | ತಮ್ಮಲ್ಲಿ |

ವಿಶೇಷ: ನೀವು ಎಂಬ ಅರ್ಥದಲ್ಲಿ ಗೌರವವನ್ನು ಸೂಚಿಸುವಾಗ ತಾವು ಎಂಬುದರ ಪ್ರಯೋಗವುಂಟು - ತಾವು ಹೇಳಿದ್ದೀರಿ, ತಮ್ಮಿಂದ, ತಮಗೆ.

೧೩. ಉಕಾರಾಂತ ಸರ್ವನಾಮ ಪುಲ್ಲಿಂಗ - ಯಾವನು

| | ಏ.ವ. | ಬ.ವ. |
|---|---|---|
| ಪ್ರ. | ಯಾವನು | ಯಾರು |
| ದ್ವಿ. | ಯಾವನನ್ನು | ಯಾರನ್ನು |
| ತೃ. | ಯಾವನಿಂದ | ಯಾರಿಂದ |
| ಚ. | ಯಾವನಿಗೆ | ಯಾರಿಗೆ |
| ಪಂ. | ಯಾವನಿಂದ | ಯಾರಿಂದ |
| ಷ. | ಯಾವನ | ಯಾರ |
| ಸ. | ಯಾವನಲ್ಲಿ | ಯಾರಲ್ಲಿ |

ಹೀಗೆಯೇ ಸ್ತ್ರೀಲಿಂಗ ಏಕವಚನದಲ್ಲಿ 'ಯಾವಳು'. ಬಹುವಚನದಲ್ಲಿ 'ಯಾರು'.

ವಿಶೇಷ: ೧. ಬಹುವಚನದ ಯಾರು ಮುಂತಾದ ರೂಪಗಳಿಗೆ ಏಕವಚನದಲ್ಲಿಯೂ ಪ್ರಯೋಗವಿದೆ - ಯಾರನ್ನು ನೋಡಲು ಹೋದೆನೋ ಅವನು ಇರಲಿಲ್ಲ.

೨. 'ಯಾವ' ಶಬ್ದದ ಮುಂದೆ ಪುಲ್ಲಿಂಗದಲ್ಲಿ 'ಆತನು', ಸ್ತ್ರೀಲಿಂಗದಲ್ಲಿ 'ಆಕೆ' ಎಂಬ ಶಬ್ದಗಳ ಪ್ರಯೋಗ ಉಂಟು - ಯಾವಾತನು (ಯಾವನು), ಯಾವಾಕೆ (ಯಾವಳು) ಇವುಗಳ ಬಹುವಚನ 'ಯಾರು'.

೧೪. ಋಕಾರಾಂತ- ಪಿತೃ

| | ಏ. ವ. | ಬ.ವ. |
|---|---|---|
| ಪ್ರ. | ಪಿತೃವು, ಪಿತೃ | ಪಿತೃಗಳು |
| ಸಂ. | ಪಿತೃವೆ, ಪಿತೃ | ಪಿತೃಗಳೆ, ಪಿತೃಗಳಿರ |
| ದ್ವಿ. | ಪಿತೃವನ್ನು | ಪಿತೃಗಳನ್ನು |
| ತೃ. | ಪಿತೃವಿಂದ | ಪಿತೃಗಳಿಂದ |

| | | |
|---|---|---|
| ಚ. | ಪಿತೃವಿಗೆ | ಪಿತೃಗಳಿಗೆ |
| ಪಂ. | ಪಿತೃವಿನಿಂದ | ಪಿತೃಗಳಿಂದ |
| ಷ. | ಪಿತೃವಿನ | ಪಿತೃಗಳ |
| ಸ. | ಪಿತೃವಿನಲ್ಲಿ | ಪಿತೃಗಳಲ್ಲಿ |

ಹೀಗೆಯೇ ಮಾತೃ, ಭ್ರಾತೃ, ದಾತೃ, ಕರ್ತೃ ಇತ್ಯಾದಿ.

೧೫. ಎಕಾರಾಂತ - ತಂದೆ

| | ಏ.ವ. | ಬ.ವ. |
|---|---|---|
| ಪ್ರ. | ತಂದೆಯು, ತಂದೆ | ತಂದೆಯರು |
| ಸಂ. | ತಂದೆಯೆ, ತಂದೆ | ತಂದೆಯರೆ, ತಂದೆಯರಿರ |
| ದ್ವಿ. | ತಂದೆಯನ್ನು | ತಂದೆಯರನ್ನು |
| ತೃ. | ತಂದೆಯಿಂದ | ತಂದೆಯರಿಂದ |
| ಚ. | ತಂದೆಗೆ | ತಂದೆಯರಿಗೆ |
| ಪಂ. | ತಂದೆಯಿಂದ | ತಂದೆಯರಿಂದ |
| ಷ. | ತಂದೆಯ | ತಂದೆಯರ |
| ಸ. | ತಂದೆಯಲ್ಲಿ | ತಂದೆಯರಲ್ಲಿ |

ಹೀಗೆಯೇ ಅತ್ತೆ, ಸೊಸೆ, ಅತ್ತಿಗೆ ಇತ್ಯಾದಿ, ಬಹುವಚನದಲ್ಲಿ 'ಗಳು' 'ಅಂದಿರು' ಮೊದಲಾದವು ಕೆಲವು ಬಂಧುವಾಚಕ ಶಬ್ದಗಳಿಗೆ ಪುನರುಕ್ತವಾಗಿ ಸೇರುತ್ತವೆ-

ಸೊಸೆಯರು, ಸೊಸೆಯರುಗಳು, ಸೊಸೆಯಂದಿರುಗಳು.

## ವಿಶೇಷ ಶಬ್ದಗಳು

೧೬. ಉಕಾರಾಂತ - ಗಂಡಸು

| | ಏ.ವ. | ಬ.ವ. |
|---|---|---|
| ಪ್ರ. | ಗಂಡಸು | ಗಂಡಸರು |
| ಸಂ. | ಗಂಡಸೆ, ಗಂಡಸು | ಗಂಡಸರೆ, ಗಂಡಸರಿರ |
| ದ್ವಿ. | ಗಂಡಸನ್ನು | ಗಂಡಸರನ್ನು |
| ತೃ. | ಗಂಡಸಿನಿಂದ, ಗಂಡಸಿಂದ | ಗಂಡಸರಿಂದ |
| ಚ. | ಗಂಡಸಿಗೆ | ಗಂಡಸರಿಗೆ |
| ಪಂ. | ಗಂಡಸಿನಿಂದ, ಗಂಡಸಿಂದ | ಗಂಡಸರಿಂದ |
| ಷ. | ಗಂಡಸಿನ | ಗಂಡಸರ |
| ಸ. | ಗಂಡಸಿನಲ್ಲಿ, ಗಂಡಸಲ್ಲಿ | ಗಂಡಸರಲ್ಲಿ |

ಹೀಗೆಯೇ ಹೆಂಗಸು, ಅರಸು.

೧೭. ಉಕಾರಾಂತ - ಗಂಡು

| | ಏ.ವ | ಬ.ವ. |
|---|---|---|
| ಪ್ರ. | ಗಂಡು | ಗಂಡುಗಳು |
| ಸಂ. | ಗಂಡೆ, ಗಂಡು | ಗಂಡುಗಳೆ, ಗಂಡುಗಳಿರ |
| ದ್ವಿ. | ಗಂಡನ್ನು | ಗಂಡುಗಳನ್ನು |
| ತೃ. | ಗಂಡಿನಿಂದ, ಗಂಡಿಂದ | ಗಂಡುಗಳಿಂದ |
| ಚ. | ಗಂಡಿಗೆ | ಗಂಡುಗಳಿಗೆ |
| ಪಂ. | ಗಂಡಿನಿಂದ, ಗಂಡಿಂದ | ಗಂಡುಗಳಿಂದ |
| ಷ. | ಗಂಡಿನ | ಗಂಡುಗಳ |
| ಗಂಡಿನಲ್ಲಿ, ಗಂಡಲ್ಲಿ | | ಗಂಡುಗಳಲ್ಲಿ |

ಹೀಗೆಯೇ ಹೆಣ್ಣು.

## ೧೮. ಉಕಾರಾಂತ - ಮಗನು

| | ಏ.ವ. | ಬ.ವ. |
|---|---|---|
| ಪ್ರ | ಮಗನು | ಮಕ್ಕಳು |
| ಸಂ. | ಮಗನೆ | ಮಕ್ಕಳೆ, ಮಕ್ಕಳಿರ |
| ದ್ವಿ. | ಮಗನನ್ನು | ಮಕ್ಕಳನ್ನು |
| ತೃ. | ಮಗನಿಂದ | ಮಕ್ಕಳಿಂದ |
| ಚ. | ಮಗನಿಗೆ | ಮಕ್ಕಳಿಗೆ |
| ಪಂ. | ಮಗನಿಂದ | ಮಕ್ಕಳಿಂದ |
| ಷ. | ಮಗನ | ಮಕ್ಕಳ |
| ಸ. | ಮಗನಲ್ಲಿ | ಮಕ್ಕಳಲ್ಲಿ |

ಹೀಗೆಯೇ ಮಗಳು.

## ೧೯. ಉಕಾರಾಂತ ಪುಲ್ಲಿಂಗ - ದೇವರು

| | ಏ.ವ. | ಬ.ವ. |
|---|---|---|
| ಪ್ರ. | ದೇವರು | ದೇವರುಗಳು |
| ಸಂ. | ದೇವರೆ | ದೇವರುಗಳೆ, ದೇವರುಗಳಿರ |
| ದ್ವಿ. | ದೇವರನ್ನು | ದೇವರುಗಳನ್ನು |
| ತೃ. | ದೇವರಿಂದ | ದೇವರುಗಳಿಂದ |
| ಚ. | ದೇವರಿಗೆ | ದೇವರುಗಳಿಗೆ |

| | | |
|---|---|---|
| ಪಂ. | ದೇವರಿಂದ | ದೇವರುಗಳಿಂದ |
| ಷ. | ದೇವರ | ದೇವರುಗಳ |
| ಸ. | ದೇವರಲ್ಲಿ | ದೇವರುಗಳಲ್ಲಿ |

೨೦. ಎಕಾರಾಂತ- ದೇವತೆ. ಮೂರು ಲಿಂಗಗಳಲ್ಲಿಯೂ ಒಂದೇ ರೂಪ.

| | ಏ.ವ. | ಬ.ವ. |
|---|---|---|
| ಪ್ರ. | ದೇವತೆಯು, ದೇವತೆ | ದೇವತೆಗಳು |
| ಸಂ. | ದೇವತೆಯೆ, ದೇವತೆ | ದೇವತೆಗಳೆ, ದೇವತೆಗಳಿರ |
| ದ್ವಿ. | ದೇವತೆಯನ್ನು | ದೇವತೆಗಳನ್ನು |
| ತೃ. | ದೇವತೆಯಿಂದ | ದೇವತೆಗಳಿಂದ |
| ಚ. | ದೇವತೆಗೆ | ದೇವತೆಗಳಿಗೆ |
| ಪಂ. | ದೇವತೆಯಿಂದ | ದೇವತೆಗಳಿಂದ |
| ಷ. | ದೇವತೆಯ | ದೇವತೆಗಳ |
| ಸ. | ದೇವತೆಯಲ್ಲಿ | ದೇವತೆಗಳಲ್ಲಿ |

## ೩. ನಪುಂಸಕಲಿಂಗ

೧. ಅಕಾರಾಂತ ನಪುಂಸಕಲಿಂಗ - ಹೊಲ

| | ಏ.ವ. | ಬ.ವ. |
|---|---|---|
| ಪ್ರ. | ಹೊಲವು, ಹೊಲ | ಹೊಲಗಳು |
| ಸಂ. | ಹೊಲವೆ, ಹೊಲ | ಹೊಲಗಳೆ |
| ದ್ವಿ. | ಹೊಲವನ್ನು | ಹೊಲಗಳನ್ನು |
| ತೃ. | ಹೊಲದಿಂದ | ಹೊಲಗಳಿಂದ |
| ಚ. | ಹೊಲಕ್ಕೆ | ಹೊಲಗಳಿಗೆ |
| ಪಂ. | ಹೊಲದ ದೆಸೆಯಿಂದ, ಹೊಲದಿಂದ | ಹೊಲಗಳ ದೆಸೆಯಿಂದ, ಹೊಲಗಳಿಂದ |
| ಷ. | ಹೊಲದ | ಹೊಲಗಳ |
| ಸ. | ಹೊಲದಲ್ಲಿ | ಹೊಲಗಳಲ್ಲಿ |

ಹೀಗೆಯೇ ನೆಲ, ಮರ, ಮಂಚ, ಫಲ, ಕೋಪ, ಪಾಠ ಇತ್ಯಾದಿ.

## ೨. ಅಕಾರಾಂತ - ಕೋಣ

| | ಏ.ವ. | ಬ.ವ. |
|---|---|---|
| ಪ್ರ. | ಕೋಣನು, ಕೋಣವು, ಕೋಣ | ಕೋಣಗಳು |
| ಸಂ. | ಕೋಣನೆ, ಕೋಣವೆ, ಕೋಣ | ಕೋಣಗಳ, ಕೋಣಗಳಿರ |
| ದ್ವಿ. | ಕೋಣನನ್ನು, ಕೋಣವನ್ನು | ಕೋಣಗಳನ್ನು |
| ತೃ. | ಕೋಣನಿಂದ, ಕೋಣದಿಂದ | ಕೋಣಗಳಿಂದ |
| ಚ. | ಕೋಣನಿಗೆ, ಕೋಣಕ್ಕೆ | ಕೋಣಗಳಿಗೆ |
| ಪಂ. | ಕೋಣನಿಂದ, ಕೋಣದಿಂದ | ಕೋಣಗಳಿಂದ |
| ಷ. | ಕೋಣನ, ಕೋಣದ | ಕೋಣಗಳ |
| ಸ. | ಕೋಣನಲ್ಲಿ, ಕೋಣದಲ್ಲಿ | ಕೋಣಗಳಲ್ಲಿ |

ಹೀಗೆಯೇ ಕೋಡಗ, ವೃಷಭ, ವರಾಹ, ಗರುಡ.

## ೩. ಅಕಾರಾಂತ- ಬಸವ (ಎತ್ತು)

| | ಏ.ವ. | ಬ.ವ. |
|---|---|---|
| ಪ್ರ. | ಬಸವನು, ಬಸವ | ಬಸವಗಳು |
| ಸಂ. | ಬಸವನೆ, ಬಸವ | ಬಸವಗಳೆ, ಬಸವಗಳಿರ |
| ದ್ವಿ. | ಬಸವನನ್ನು | ಬಸವಗಳನ್ನು |
| ತೃ. | ಬಸವನಿಂದ | ಬಸವಗಳಿಂದ |
| ಚ. | ಬಸವನಿಗೆ, ಬಸವಕ್ಕೆ | ಬಸವಗಳಿಗೆ |
| ಪಂ. | ಬಸವನಿಂದ | ಬಸವಗಳಿಂದ |
| ಷ. | ಬಸವನ | ಬಸವಗಳ |
| ಸ. | ಬಸವನಲ್ಲಿ | ಬಸವಗಳಲ್ಲಿ |

## ೪. ಇಕಾರಾಂತ - ಕುರಿ

| | ಏ.ವ. | ಬ.ವ. |
|---|---|---|
| ಪ್ರ. | ಕುರಿಯು, ಕುರಿ | ಕುರಿಗಳು |
| ಸಂ. | ಕುರಿಯೆ, ಕುರಿ | ಕುರಿಗಳೆ, ಕುರಿಗಳಿರ |
| ದ್ವಿ. | ಕುರಿಯನ್ನು | ಕುರಿಗಳನ್ನು |
| ತೃ. | ಕುರಿಯಿಂದ | ಕುರಿಗಳಿಂದ |
| ಚ. | ಕುರಿಗೆ | ಕುರಿಗಳಿಗೆ |
| ಪಂ. | ಕುರಿಯಿಂದ | ಕುರಿಗಳಿಂದ |

| | | |
|---|---|---|
| ಷ. | ಕುರಿಯ | ಕುರಿಗಳ |
| ಸ. | ಕುರಿಯಲ್ಲಿ | ಕುರಿಗಳಲ್ಲಿ |

ಹೀಗೆಯೇ ನರಿ, ಮರಿ, ಗಿರಿ, ನದಿ, ಬುದ್ಧಿ ಇತ್ಯಾದಿ.

**೫. ಉಕಾರಾಂತ - ಕರು**

| | ಏ.ವ. | ಬ.ವ. |
|---|---|---|
| ಪ್ರ. | ಕರುವು, ಕರು | ಕರುಗಳು |
| ಸಂ. | ಕರುವೆ, ಕರು | ಕರುಗಳೆ, ಕರುಗಳಿರ |
| ದ್ವಿ. | ಕರುವನ್ನು | ಕರುಗಳನ್ನು |
| ತೃ. | ಕರುವಿನಿಂದ, ಕರುವಿಂದ | ಕರುಗಳಿಂದ |
| ಚ. | ಕರುವಿಗೆ | ಕರುಗಳಿಗೆ |
| ಪಂ. | ಕರುವಿನಿಂದ, ಕರುವಿಂದ | ಕರುಗಳಿಂದ |
| ಷ. | ಕರುವಿನ | ಕರುಗಳ |
| ಸ. | ಕರುವಿನಲ್ಲಿ, ಕರುವಲ್ಲಿ | ಕರುಗಳಲ್ಲಿ |

ಹೀಗೆಯೇ ತುರು, ಮಡು, ನಗು ಇತ್ಯಾದಿ. ಮತ್ತು ಬಾಹು, ವಾಯು ಮುಂತಾದ ಉಕಾರಾಂತ ಸಂಸ್ಕೃತ ಶಬ್ದಗಳು.

**೬. ಉಕಾರಾಂತ - ಬೆಕ್ಕು**

| | ಏ.ವ | ಬ.ವ. |
|---|---|---|
| ಪ್ರ. | ಬೆಕ್ಕು | ಬೆಕ್ಕುಗಳು |
| ಸಂ. | ಬೆಕ್ಕೆ, ಬೆಕ್ಕು | ಬೆಕ್ಕುಗಳೆ |
| ದ್ವಿ. | ಬೆಕ್ಕನ್ನು | ಬೆಕ್ಕುಗಳನ್ನು |
| ತೃ. | ಬೆಕ್ಕಿನಿಂದ, ಬೆಕ್ಕಿಂದ | ಬೆಕ್ಕುಗಳಿಂದ |
| ಚ. | ಬೆಕ್ಕಿಗೆ | ಬೆಕ್ಕುಗಳಿಗೆ |
| ಪಂ. | ಬೆಕ್ಕಿನಿಂದ, ಬೆಕ್ಕಿಂದ (ಬೆಕ್ಕಿನ ದೆಸೆಯಿಂದ) | ಬೆಕ್ಕುಗಳಿಂದ |
| ಷ. | ಬೆಕ್ಕಿನ, ಬೆಕ್ಕ | ಬೆಕ್ಕುಗಳ |
| ಸ. | ಬೆಕ್ಕಿನಲ್ಲಿ, ಬೆಕ್ಕಲ್ಲಿ | ಬೆಕ್ಕುಗಳಲ್ಲಿ |

ಹೀಗೆಯೇ ಗೋವು, ಕಣ್ಣು, ಮಣ್ಣು, ಕಲ್ಲು, ಸೊಕ್ಕು, ಗೂಡು, ಕೋಡು, ನಾಡು, ತೋಳು, ನಾರು, ಊರು, ಬೇರು, ಮಾತು, ಪೊದರು, ಬೆಂಗಳೂರು, ಮೈಸೂರು ಇತ್ಯಾದಿ.

## ೭. ಉಕಾರಾಂತ ಸರ್ವನಾಮ - ಇದು.

| | ಏ.ವ. | ಬ.ವ. |
|---|---|---|
| ಪ್ರ. | ಇದು | ಇವು, ಇವುಗಳು |
| ದ್ವಿ. | ಇದನ್ನು | ಇವನ್ನು, ಇವುಗಳನ್ನು |
| ತೃ. | ಇದರಿಂದ | ಇವುಗಳಿಂದ |
| ಚ. | ಇದಕ್ಕೆ | ಇವುಗಳಿಗೆ |
| ಪಂ. | ಇದರಿಂದ | ಇವುಗಳಿಂದ |
| ಷ. | ಇದರ | ಇವುಗಳ |
| ಸ. | ಇದರಲ್ಲಿ | ಇವುಗಳಲ್ಲಿ |

ಹೀಗೆಯೇ ಅದು-ಅವು, ಅವುಗಳು; ಅಂಥದು- ಅಂಥವು, ಅಂಥವುಗಳು; ಇಂಥದು- ಇಂಥವು, ಇಂಥವುಗಳು.

ವಿಶೇಷ : ನ. ಅಂಥದು, ಅಂತಹುದು, ಅಂತದು;

ಪು. ಅಂಥವನು, ಅಂತಹವನು, ಅಂತವನು;

ಸ್ತ್ರೀ. ಅಂಥವಳು, ಅಂತಹವಳು, ಅಂತವಳು.

ಹೀಗೆಯೇ ನಾನಾರೂಪಾಂತರಗಳು ಹೊಸಗನ್ನಡದಲ್ಲಿ ಕಂಡುಬರುತ್ತವೆ.

## ೮. ಉಕಾರಾಂತ - ಯಾವುದು

| | ಏ.ವ. | ಬ.ವ. |
|---|---|---|
| ಪ್ರ. | ಯಾವುದು | ಯಾವುವು, ಯಾವುವುಗಳು |
| ದ್ವಿ. | ಯಾವುದನ್ನು | ಯಾವುದನ್ನು, ಯಾವುವುಗಳನ್ನು |
| ತೃ. | ಯಾವುದರಿಂದ | ಯಾವುವುಗಳಿಂದ |
| ಚ. | ಯಾವುದಕ್ಕೆ | ಯಾವುವುಗಳಿಗೆ |
| ಪಂ | ಯಾವುದರಿಂದ | ಯಾವುವುಗಳಿಂದ |
| ಷ. | ಯಾವುದರ | ಯಾವುವುಗಳ |
| ಸ. | ಯಾವುದರಲ್ಲಿ | ಯಾವುವುಗಳಲ್ಲಿ. |

## ೯. ಎಕಾರಾಂತ ನಪುಂಸಕಲಿಂಗ - ಮನೆ

| | ಏ.ವ. | ಬ.ವ. |
|---|---|---|
| ಪ್ರ. | ಮನೆಯು, ಮನೆ | ಮನೆಗಳು |
| ಸಂ. | ಮನೆಯೆ, ಮನೆ | ಮನೆಗಳೆ |

| | | |
|---|---|---|
| ದ್ವಿ. | ಮನೆಯನ್ನು | ಮನೆಗಳನ್ನು |
| ತೃ. | ಮನೆಯಿಂದ | ಮನೆಗಳಿಂದ |
| ಚ. | ಮನೆಗೆ | ಮನೆಗಳಿಗೆ |
| ಪಂ. | ಮನೆಯಿಂದ | ಮನೆಗಳಿಂದ |
| ಷ. | ಮನೆಯ | ಮನೆಗಳ |
| ಸ. | ಮನೆಯಲ್ಲಿ | ಮನೆಗಳಲ್ಲಿ |

ಹೀಗೆಯೇ ಶಾಲೆ, ಕಲೆ, ಬೆಲೆ, ಕತ್ತೆ ಇತ್ಯಾದಿ. ಗೋಶಬ್ದವು ಗೋವು ಎಂದು ಉಕಾರಾಂತವಾಗಿ ಬೆಕ್ಕು ( ಸಂಖ್ಯೆ ೬) ಶಬ್ದದಂತೆ ನಡೆಯುತ್ತದೆ.

## ವಿಶೇಷ ಶಬ್ದಗಳು

೧೦. ಇಕಾರಾಂತ ನಪುಂಸಕಲಿಂಗ - ಬಾಯಿ

| | ಏ.ವ. | ಬ.ವ. |
|---|---|---|
| ಪ್ರ. | ಬಾಯಿಯು, ಬಾಯಿ | ಬಾಯಿಗಳು |
| ಸಂ. | ಬಾಯಿಯೆ, ಬಾಯೆ | ಬಾಯಿಗಳೆ |
| ದ್ವಿ. | ಬಾಯಿಯನ್ನು, ಬಾಯನ್ನು | ಬಾಯಿಗಳನ್ನು |
| ತೃ. | ಬಾಯಿಯಿಂದ, ಬಾಯಿಂದ | ಬಾಯಿಗಳಿಂದ |
| ಚ. | ಬಾಯಿಗೆ | ಬಾಯಿಗಳಿಗೆ |
| ಪಂ. | ಬಾಯಿಯಿಂದ, ಬಾಯಿಂದ | ಬಾಯಿಗಳಿಂದ |
| ಷ. | ಬಾಯಿಯ, ಬಾಯ | ಬಾಯಿಗಳ |
| ಸ. | ಬಾಯಿಯಲ್ಲಿ, ಬಾಯಲ್ಲಿ | ಬಾಯಿಗಳಲ್ಲಿ |

ಇಕಾರಾಂತ ಶಬ್ದಗಳಲ್ಲಿ ಇಕಾರದ ಹಿಂದೆ ಯಕಾರವಿದ್ದಲ್ಲಿ ಆ ಶಬ್ದಗಳ ಏಕವಚನದಲ್ಲಿ ರೂಪಗಳು ಮೇಲ್ಕಂಡಂತೆ ಎರಡು ಬಗೆಯಾಗುತ್ತವೆ. ಹೀಗೆಯೇ ನಾಯಿ, ಕಾಯಿ. ಸ್ತ್ರೀಲಿಂಗದ ತಾಯಿ ಶಬ್ದವೂ ಹೀಗೆಯೇ.

೧೧. ಉಕಾರಾಂತ - ಏನು (ಇದಕ್ಕೆ ಬಹುವಚನವಿಲ್ಲ)

| | |
|---|---|
| ಪ್ರ. | ಏನು |
| ದ್ವಿ. | ಏನನ್ನು |
| ತೃ. | ಏತರಿಂದ |
| ಚ. | ಏತಕ್ಕೆ, ಏಕೆ |
| ಪಂ. | ಏತರಿಂದ |
| ಷ. | ಏತರ |
| ಸ. | ಏತರಲ್ಲಿ |

ಚತುರ್ಥೀ ವಿಭಕ್ತಿಯಲ್ಲಿ 'ಏನಕೆ' ಎಂಬುದು ತಪ್ಪು.

೧೨. ಎಲ್ಲ ಎಂಬ ವಿಶೇಷಣವು ನಾಮಪದವಾದಾಗ ಪುಲ್ಲಿಂಗ ಸ್ತ್ರೀಲಿಂಗಗಳಲ್ಲಿ ಎಲ್ಲವರು, ಎಲ್ಲರು ಎಂಬ ರೂಪಗಳನ್ನು ಪಡೆಯುತ್ತದೆ. ಇವು ನಿತ್ಯಬಹು ವಚನದಲ್ಲಿರುತ್ತವೆ.

### ಪುಲ್ಲಿಂಗ-ಸ್ತ್ರೀಲಿಂಗ

| | ಬ.ವ. |
|---|---|
| ಪ್ರ. | ಎಲ್ಲವರು, ಎಲ್ಲರು |
| ದ್ವಿ. | ಎಲ್ಲವರನ್ನು, ಎಲ್ಲರನ್ನು |
| ತೃ. | ಎಲ್ಲವರಿಂದ, ಎಲ್ಲರಿಂದ |
| ಚ. | ಎಲ್ಲವರಿಗೆ, ಎಲ್ಲರಿಗೆ |
| ಪಂ. | ಎಲ್ಲವರಿಂದ, ಎಲ್ಲರಿಂದ |
| ಷ. | ಎಲ್ಲವರ, ಎಲ್ಲರ |
| ಸ. | ಎಲ್ಲವರಲ್ಲ, ಎಲ್ಲರಲ್ಲಿ |

ನಪುಂಸಕ ಲಿಂಗದಲ್ಲಿ ಈ ಶಬ್ದವು ಎರಡು ವಚನಗಳಲ್ಲಿಯೂ ಇರುತ್ತದೆ.

### ನಪುಂಸಕಲಿಂಗ

| | ಏ.ವ. | ಬ.ವ. |
|---|---|---|
| ಪ್ರ. | ಎಲ್ಲದು | ಎಲ್ಲವು, ಎಲ್ಲವುಗಳು |
| ದ್ವಿ. | ಎಲ್ಲದನ್ನು | ಎಲ್ಲವನ್ನು, ಎಲ್ಲವುಗಳನ್ನು |
| ತೃ. | ಎಲ್ಲದರಿಂದ | ಎಲ್ಲವುಗಳಿಂದ |
| ಚ. | ಎಲ್ಲದಕ್ಕೆ | ಎಲ್ಲವುಗಳಿಗೆ |
| ಪಂ. | ಎಲ್ಲದರಿಂದ | ಎಲ್ಲವುಗಳಿಂದ |
| ಷ. | ಎಲ್ಲದರ | ಎಲ್ಲವುಗಳ |
| ಸ. | ಎಲ್ಲದರಲ್ಲಿ | ಎಲ್ಲವುಗಳಲ್ಲಿ |

'ಎಲ್ಲ' ಶಬ್ದವು ಬರಿಯ ವಿಶೇಷಣವಾದಾಗ 'ಎಲ್ಲ, ಎಲ್ಲಾ' ಎಂಬ ಎರಡು ರೂಪಗಳನ್ನು ಪಡೆಯುತ್ತದೆ. ಉದಾ: ಎಲ್ಲ ಜನರು, ಎಲ್ಲಾ ಜನರು.

### ಸಂಖ್ಯಾವಾಚಕಗಳು

೧೩. ಸಂಖ್ಯಾವಾಚಕಗಳು ನಾಮಪದಗಳಾಗುವಾಗ ಪುಲ್ಲಿಂಗ ಸ್ತ್ರೀಲಿಂಗಗಳಲ್ಲಿ ಈ ರೀತಿ ರೂಪಗಳನ್ನು ಪಡೆಯುತ್ತವೆ.

ಒಂದು = ಒಬ್ಬನು (ಏ.ವ) ಒಬ್ಬರು (ಬ.ವ. ಗೌರವಾರ್ಥದಲ್ಲಿ)
ಎರಡು = ಇಬ್ಬರು, ಈರ್ವರು
ಮೂರು = ಮೂವರು
ನಾಲ್ಕು = ನಾಲ್ವರು
ಐದು = ಐವರು
ಆರು = ಅರ್ವರು

ಇವು ಹೀಗೆ ನಡೆಯುತ್ತವೆ -

ಪ್ರ. ಒಬ್ಬರು
ದ್ವಿ. ಒಬ್ಬರನ್ನು
ತೃ. ಒಬ್ಬರಿಂದ
ಚ. ಒಬ್ಬರಿಗೆ
ಪಂ ಒಬ್ಬರಿಂದ
ಷ. ಒಬ್ಬರ
ಸ. ಒಬ್ಬರಲ್ಲಿ

ಇವು ವಿಶೇಷಣಗಳಾದಾಗ ಒಬ್ಬ ಹುಡುಗ, ಒಬ್ಬ ಹುಡುಗಿ, ಇಬ್ಬರು ಹುಡುಗರು, ಎರಡು ಮಂದಿ ಹುಡುಗರು - ಈ ರೀತಿ ಆಗುತ್ತವೆ.

## ನಪುಂಸಕಲಿಂಗ

ಪ್ರ. ಒಂದು
ದ್ವಿ. ಒಂದನ್ನು
ತೃ. ಒಂದರಿಂದ
ಚ. ಒಂದಕ್ಕೆ
ಪಂ. ಒಂದರಿಂದ
ಷ. ಒಂದರ
ಸ. ಒಂದರಲ್ಲಿ.

ಹೀಗೆಯೇ ಎರಡು, ಮೂರು ಇತ್ಯಾದಿ.

## ವಿಭಕ್ತಿ ಪ್ರತಿರೂಪಕಾವ್ಯಯಗಳು

ಮೇಲೆ, ಮೇಲಕ್ಕೆ, ಕೆಳಗೆ, ಕೆಳಕ್ಕೆ, ಒಳಗೆ, ಒಳಕ್ಕೆ, ಒಳಗಿನಿಂದ, ಹಿಂದೆ, ಹಿಂದಿನಿಂದ, ಹಿಂದಕ್ಕೆ- ಮುಂತಾದ ಹಲವು ಶಬ್ದಗಳು ಕೆಲವೇ ವಿಭಕ್ತಿಗಳನ್ನು ಪಡೆದಿರುತ್ತವೆ. ಇವನ್ನು ಅವ್ಯಯಗಳ ಗುಂಪಿಗೆ ಸೇರಿಸಿ ವಿಭಕ್ತಿ ಪ್ರತಿರೂಪಕಾವ್ಯಯ ಗಳೆಂದು ಕರೆಯಬಹುದು.



# ಕಾರಕ ಪ್ರಕರಣ

ವಾಕ್ಯವು ಕ್ರಿಯಾಪದದಲ್ಲಿ ಸಮಾಪ್ತವಾಗುತ್ತದೆ. ಕ್ರಿಯಾಪದದಿಂದ ವಾಕ್ಯದ ಅರ್ಥವು ಪೂರ್ಣವಾಗುತ್ತದೆ. ಯಾವುದಕ್ಕೆ ಕ್ರಿಯೆಯಲ್ಲಿ ಅನ್ವಯವಿದೆಯೋ ಯಾವುದು ಕ್ರಿಯೆ ನಡೆಯಲು ಸಹಾಯಕವೋ ಅದಕ್ಕೆ ಕಾರಕವೆಂದು ಹೆಸರು. ಕಾರಕಗಳು ಆರು- ಕರ್ತೃ, ಕರ್ಮ, ಕರಣ, ಸಂಪ್ರದಾನ, ಅಪಾದಾನ ಮತ್ತು ಅಧಿಕರಣ. ಷಷ್ಠೀ ವಿಭಕ್ತಿಯಿದ್ದಾಗ ಸಾಮಾನ್ಯವಾಗಿ ಅರ್ಥಕ್ಕೆ ಕ್ರಿಯೆಯೊಡನೆ ಅನ್ವಯವಿರುವುದಿಲ್ಲ.

ಉದಾ : ಶಾರದೆಯ ತಂಗಿ ಹಾಡುತ್ತಾಳೆ. ಮರದ ಎಲೆ ಕೆಳಗೆ ಬಿದ್ದಿತು.

ಇಲ್ಲಿ ಶಾರದೆಗೆ ತಂಗಿಯಲ್ಲಿ ಅನ್ವಯ. ಮರಕ್ಕೆ ಎಲೆಯಲ್ಲಿ ಅನ್ವಯ. ಕ್ರಿಯೆಯಲ್ಲಿ ಅನ್ವಯವಿಲ್ಲ. ಆದ್ದರಿಂದ ಇಲ್ಲಿ ಷಷ್ಠೀ ವಿಭಕ್ತಿ ಕಾರಕ ವಿಭಕ್ತಿಯಲ್ಲ. ಆದರೆ ಕೃದಂತ ಭಾವನಾಮದ ಯೋಗವಿದ್ದಾಗ ಷಷ್ಠಿಗೆ ಕ್ರಿಯೆಯೊಡನೆ ಅನ್ವಯವಿರುತ್ತದೆ. ಆಗ ಅದು ಕಾರಕವಿಭಕ್ತಿಯಾಗುತ್ತದೆ.

ಉದಾ : ಮಗುವಿನ ಆಟ. ಕಾವ್ಯದ ಶ್ರವಣ.

ಇಲ್ಲಿ ಆಡುವ ಕ್ರಿಯೆಗೆ ಮಗು ಕರ್ತೃ. ಕೇಳುವ ಕ್ರಿಯೆಗೆ ಕಾವ್ಯ ಕರ್ಮ. ಈ ಉದಾಹರಣೆಗಳಲ್ಲಿ ಷಷ್ಠಿ ಕಾರಕವಿಭಕ್ತಿಯೇ. ಅದು ಕಾರಕವಿಭಕ್ತಿಯಾದಾಗ ಷಷ್ಠ್ಯಂತವು ಕರ್ತೃವೋ ಕರ್ಮವೋ ಆಗಿರುತ್ತದೆ. ಸಂಬೋಧನಾ ವಿಭಕ್ತಿಯು ಪ್ರಥಮಾವಿಭಕ್ತಿಯ ಒಂದು ಭೇದ. ಆದ್ದರಿಂದ ಕಾರಕಗಳು ಆರು; ವಿಭಕ್ತಿಗಳು ಏಳು.* ಕಾರಕವಲ್ಲದಿದ್ದರೂ ಬೇರೆ ಬೇರೆ ಕಾರಣದಿಂದ ವಿಭಕ್ತಿ ಬರುತ್ತದೆ.

ಕಾರಕವಾಚಕಗಳ ಮೇಲೆ ಸಾಮಾನ್ಯವಾಗಿ ಕೆಳಗೆ ಕಂಡಂತೆ ವಿಭಕ್ತಿಗಳು ಬರುತ್ತದೆ.

| ಕಾರಕ | ವಿಭಕ್ತಿ |
|---|---|
| ಕರ್ತೃ | ಪ್ರಥಮಾ (ಕರ್ಮಣಿ ಪ್ರಯೋಗದಲ್ಲಿ ತೃತೀಯಾ, ಭಾವಕೃದಂತದ ಯೋಗವಿದ್ದಲ್ಲಿ ತೃತೀಯಾ ಮತ್ತು ಷಷ್ಠೀ) |
| ಕರ್ಮ | ದ್ವಿತೀಯಾ (ಕರ್ಮಣಿ ಪ್ರಯೋಗದಲ್ಲಿ ಪ್ರಥಮಾ. ಭಾವಕೃದಂತದ ಯೋಗವಿದ್ದಲ್ಲಿ ಷಷ್ಠೀ) |

---

*1. ಕಾರಕಮಾಱು ಕರ್ಮಕರಣಾದಿಕದಿಂ ಪ್ರಥಮಾದಿಭೇದ ನಿ
ರ್ಧಾರದಿಂದಂ ಪಿಡಿದು ನಿಲ್ವ ವಿಭಕ್ತಿಗಳೇೞಿನಿಕ್ಕು.....॥

-ಕವಿರಾಜಮಾರ್ಗ, ೧-೧೧೪

2. ಕಾವ್ಯಾವಲೋಕನ, ಸೂತ್ರ ೧೫-೧೬.
3. ಶಬ್ದಮಣಿದರ್ಪಣ, ಸೂತ್ರ ೯೨ (ವೃತ್ತಿ)

ಕಾರಕಗಳಲ್ಲಿ ಕರ್ತೃವೇ ಮುಖ್ಯವಾದ ಕಾರಕ. ಕರ್ಮಾದಿಗಳು ಕರ್ತೃವಿಗೆ ಅಧೀನವಾದವು.

| | |
|---|---|
| ಕರಣ | ತೃತೀಯಾ |
| ಸಂಪ್ರದಾನ | ಚತುರ್ಥೀ |
| ಅಪಾದಾನ | ಪಂಚಮೀ |
| ಅಧಿಕರಣ | ಸಪ್ತಮೀ |

## ಕಾರಕಗಳ ಲಕ್ಷಣ

೧. ಕರ್ತೃ : ಕೆಲಸವನ್ನು ಮಾಡತಕ್ಕವನು ಮತ್ತು ಮಾಡಿಸತಕ್ಕವನು ಕರ್ತೃ. ಕೆಲಸವನ್ನು ಮಾಡಿಸತಕ್ಕವನಿಗೆ ಪ್ರಯೋಜಕ ಕರ್ತೃ, ಪ್ರೇರಕ ಕರ್ತೃ ಎಂಬ ಹೆಸರುಗಳೂ ಉಂಟು.

ಉದಾ : ಕರ್ತೃ - **ಹುಡುಗನು** ಪಾಠವನ್ನು ಓದುತ್ತಾನೆ

**ಬಡಗಿ** ಮನೆಯನ್ನು ಕಟ್ಟುತ್ತಾನೆ.

ಪ್ರಯೋಜಕ ಕರ್ತೃ - **ಉಪಾಧ್ಯಾಯನು** ಹುಡುಗನಿಂದ ಪಾಠವನ್ನು ಓದಿಸುತ್ತಾನೆ. **ಅವನು** ಬಡಗಿಯಿಂದ ಮನೆಯನ್ನು ಕಟ್ಟಿಸುತ್ತಾನೆ.

೨. ಕರ್ಮ : ಮಾಡುವ ಕೆಲಸಕ್ಕೆ ಯಾವುದು ವಿಷಯವೋ ಅದು ಕರ್ಮ. ಕ್ರಿಯಾಪದದ ಮೇಲೆ ಸಾಮಾನ್ಯವಾಗಿ 'ಯಾರನ್ನು ? ಯಾವುದನ್ನು ?' ಎಂದು ಪ್ರಶ್ನೆ ಮಾಡಿದಾಗ ಯಾವುದು ಉತ್ತರವೋ ಅದು ಕರ್ಮ.

ಉದಾ : ರಾಮನು **ತಂದೆಯನ್ನು** ನೋಡಿದನು.

ಮಗು **ಹಾಲನ್ನು** ಕುಡಿಯುತ್ತದೆ.

ಇಲ್ಲಿ ' ಯಾರನ್ನು ನೋಡಿದನು?' ಎಂಬ ಪ್ರಶ್ನೆಗೆ 'ತಂದೆಯನ್ನು' ಎಂದೂ 'ಯಾವುದನ್ನು ಕುಡಿದನು?' ಎಂಬ ಪ್ರಶ್ನೆಗೆ 'ಹಾಲನ್ನು' ಎಂದೂ ಉತ್ತರ ದೊರೆಯುತ್ತದೆ.

೩. ಕರಣ : ಕೆಲಸವನ್ನು ಮಾಡುವಾಗ ಕರ್ತೃ ಯಾವುದನ್ನು ಮುಖ್ಯ ಸಾಧನವನ್ನಾಗಿ ಬಳಸುತ್ತಾನೋ ಅದು ಕರಣ.

ಉದಾ : ನಾನು **ಲೇಖನಿಯಿಂದ** ಬರೆಯುತ್ತೇನೆ.

ಬಡಗಿ **ಕೊಡಲಿಯಿಂದ** ಕಡಿದನು.

೪. ಸಂಪ್ರದಾನ : ಕೊಡುವ ವಸ್ತು ಮತ್ತು ಮಾಡುವ ಕೆಲಸ ಯಾರ ಉದ್ದೇಶದಿಂದಲೋ ಅದು ಸಂಪ್ರದಾನ.

ಉದಾ : ಮಗಳಿಗೆ ಪುಸ್ತಕವನ್ನು ಕೊಡುತ್ತಾನೆ.

ಯುದ್ಧಕ್ಕೆ ಸಜ್ಜಾಗುತ್ತಾನೆ.

೫. ಅಪಾದಾನ : ಒಂದು ಕೆಲಸ ನಡೆದಾಗ ಯಾವುದರಿಂದ ವಿಭಾಗ ಉಂಟಾಗುತ್ತದೆಯೋ ಅದು ಅಪಾದಾನ*

ಉದಾ : ೧. ಮರದಿಂದ (ಮರದ ದೆಸೆಯಿಂದ) ಹಣ್ಣು ಬಿದ್ದಿತು. (ಹಣ್ಣಿಗೆ ಮರದಿಂದ ವಿಭಾಗ ಉಂಟಾಯಿತು).

೨. ರೈತನು ಹಳ್ಳಿಯಿಂದ (ಹಳ್ಳಿಯ ದೆಸೆಯಿಂದ) ಬರುತ್ತಾನೆ. (ರೈತನಿಗೆ ಹಳ್ಳಿಯಿಂದ ವಿಭಾಗ ಉಂಟಾಯಿತು)

೬. ಅಧಿಕರಣ : ಕೆಲಸ ನಡೆಯಲು ಯಾವುದು ಆಧಾರವೋ ಅದು ಅಧಿಕರಣ.

ಉದಾ: **ತಟ್ಟೆಯಲ್ಲಿ** ಊಟ ಮಾಡುತ್ತಾನೆ.

**ಹೊಳೆಯಲ್ಲಿ** ಮೈತೊಳೆಯುತ್ತಾನೆ.

ಹೀಗೆ ಎಲ್ಲ ಕಾರಕಗಳೂ ಕ್ರಿಯೆಯಲ್ಲಿ ಅನ್ವಿತವಾಗಿರುತ್ತವೆ.

## ೧. ಪ್ರಥಮಾ ವಿಭಕ್ತಿ

೧. ಕರ್ತೃವಾಚಕದ ಮೇಲೆ ಕರ್ತರಿ ಪ್ರಯೋಗದಲ್ಲಿ ಪ್ರಥಮಾವಿಭಕ್ತಿ ಬರುತ್ತದೆ.

ಉದಾ : ಕರ್ತೃ - ತಾಯಿಯು ಅಡಿಗೆಯನ್ನು ಮಾಡುತ್ತಾಳೆ.

ರೈತನು ಹೊಲವನ್ನು ಉಳುತ್ತಾನೆ.

ಪ್ರಯೋಜಕಕರ್ತೃ- ಉಪಾಧ್ಯಾಯನು ಶಿಷ್ಯನಿಂದ ಪಾಠವನ್ನು ಓದಿಸಿದನು.

೨. ಕರ್ಮಣಿ ಪ್ರಯೋಗದಲ್ಲಿ ಕರ್ಮವಾಚಕದ ಮೇಲೆ ಪ್ರಥಮಾವಿಭಕ್ತಿ ಬರುತ್ತದೆ.

ಉದಾ : ನನ್ನಿಂದ ಪಾಠವು ಬರೆಯಲ್ಪಟ್ಟಿತು.

ಪಂಪನಿಂದ ಕಾವ್ಯವು ರಚಿಸಲ್ಪಟ್ಟಿತು.

---

*ವಿಶೇಷ : ಕರಣ ಮತ್ತು ಅಪಾದಾನಗಳಿರುವ ಮಹತ್ತರವಾದ ಭೇದವನ್ನು ಗಮನಿಸಬೇಕು. ಕರಣವು ಕ್ರಿಯೆಯನ್ನು ನಡೆಸಲು ಅವಶ್ಯವಾದ ಸಾಧನ, ಉಪಕರಣ (Instrument), ಈ ಉಪಕರಣದಲ್ಲಿಯೂ ಒಂದು ಕ್ರಿಯೆ ಹುಟ್ಟಿಯೇ ಪ್ರಧಾನವಾದ ಕ್ರಿಯೆಯನ್ನು ನಡೆಸುತ್ತದೆ. ಲೇಖನಿಯಿಂದ ಬರೆಯುತ್ತಾನೆ- ಎನ್ನುವಾಗ ಲೇಖನಿ ಕರಣ. ಅದರಲ್ಲಿ ಚಲನಕ್ರಿಯೆ ಹುಟ್ಟದೆ ಬರೆಯುವ ಕ್ರಿಯೆ ನಡೆಯುವುದಿಲ್ಲ. ಅಪಾದಾನವಾದರೋ ವಿಭಾಗದ ಅವಧಿ. ಅದು ಉಪಕರಣವಲ್ಲ. ಅದರಲ್ಲಿ ಕ್ರಿಯೆ ಹುಟ್ಟದೆ ಇದ್ದರೂ ಪ್ರಧಾನಕ್ರಿಯೆ ನಡೆಯುತ್ತದೆ. ಹಳ್ಳಿಯಿಂದ ಬರುತ್ತಾನೆ- ಎನ್ನುವಾಗ ಹಳ್ಳಿ ವಿಭಾಗಕ್ಕೆ ಅವಧಿ. ಅದರಲ್ಲಿ ಯಾವ ಕ್ರಿಯೆಯೂ ಇಲ್ಲದೆ ಬರುವ ಕ್ರಿಯೆ ನಡೆಯುತ್ತದೆ. ತೃತೀಯಾ ವಿಭಕ್ತಿಯ ಅರ್ಥವೇ ಬೇರೆ. ಪಂಚಮೀ ವಿಭಕ್ತಿಯ ಅರ್ಥವೇ ಬೇರೆ.

ಪ್ರಥಮಾವಿಭಕ್ತಿಯ ಏಕವಚನಕ್ಕೆ ವಿಕಲ್ಪವಾಗಿ ಲೋಪಬರುತ್ತದೆ.

ತಾಯಿ ಅಡಿಗೆಯನ್ನು ಮಾಡುತ್ತಾಳೆ.

ಪಂಪನಿಂದ ಕಾವ್ಯ ರಚಿಸಲ್ಪಟ್ಟಿತು.

**ಸಂಬೋಧನ ಪ್ರಥಮಾವಿಭಕ್ತಿ**

ಸಂಬೋಧನವೆಂದರೆ ಇನ್ನೊಬ್ಬರನ್ನು ಕರೆಯುವುದು. ತನ್ನ ಮಾತನ್ನು ಆಲಿಸುವಂತೆ ಅಭಿಮುಖೀಕರಣ. ಈ ಅರ್ಥದಲ್ಲಿ ಸಂಬೋಧನ ವಿಭಕ್ತಿ ಬರುತ್ತದೆ.

ಉದಾ: **ಅಮ್ಮ**, ಶಾಲೆಗೆ ಹೋಗುತ್ತೇನೆ.

**ರಾಮ**, ಇಲ್ಲಿ ಬಾ.

**೨. ದ್ವಿತೀಯಾ ವಿಭಕ್ತಿ**

೧. ಕರ್ಮವಾಚಕದ ಮೇಲೆ ದ್ವಿತೀಯಾ ವಿಭಕ್ತಿ ಬರುತ್ತದೆ.

ಉದಾ : ಪುಸ್ತಕವನ್ನು ಕೊಡುತ್ತಾನೆ.

ಬಟ್ಟೆಯನ್ನು ಉಡುತ್ತಾನೆ.

ಹಾಲನ್ನು ಕುಡಿದಳು.

ಕೆಲವು ಕ್ರಿಯೆಗಳಿಗೆ ಎರಡು ಕರ್ಮಗಳಿರಬಹುದು..

ಆಳು ಹಸುವನ್ನು ಹಾಲನ್ನು ಕರೆಯುತ್ತಾನೆ.

ಉಪಾಧ್ಯಾಯನು ಶಿಷ್ಯನನ್ನು ಪ್ರಶ್ನೆಯನ್ನು ಕೇಳುತ್ತಾನೆ.

೨. ಅಕರ್ಮಕಧಾತುಗಳು ಪ್ರೇರಣಾರ್ಥದಲ್ಲಿದ್ದಾಗ ಪ್ರೇರ್ಯಕರ್ತೃವಾಚಕದ ಮೇಲೆ ದ್ವಿತೀಯಾ ವಿಭಕ್ತಿ ಬರುವುದು. ಪ್ರೇರ್ಯಕರ್ತೃ= ಪ್ರೇರಣಾರ್ಥದಲ್ಲಿ 'ಇಸು' ಪ್ರತ್ಯಯ ಬರುವುದಕ್ಕೆ ಮೊದಲು ಯಾವುದು ಕರ್ತೃವೋ ಅದು.

ಉದಾ : ಮಗು ಮಲಗಿತು - ತಾಯಿ ಮಗುವನ್ನು ಮಲಗಿಸಿದಳು.

ಹಾವು ಆಡಿತು - ಹಾವಾಡಿಗನು ಹಾವನ್ನು ಆಡಿಸಿದನು.

೩. ಕಾಲವಾಚಕ ಮತ್ತು ಪರಿಮಾಣವಾಚಕಗಳ ದ್ವಿತೀಯಾ ವಿಭಕ್ತಿಗೆ ವಿಕಲ್ಪವಾಗಿ ಲೋಪ ಬರುತ್ತದೆ.

ಉದಾ : ಒಂದು ತಿಂಗಳನ್ನು ಕಳೆದನು - ಒಂದು ತಿಂಗಳು ಕಳೆದನು.

ಒಂದು ಹರದಾರಿಯನ್ನು ನಡೆದನು -ಒಂದು ಹರದಾರಿ ನಡೆದನು.

ಹಸು ಹಾಲನ್ನು ಒಂದು ಸೇರು ಕೊಡುತ್ತದೆ- ಒಂದು ಸೇರು ಕೊಡುತ್ತದೆ.

ಅವನು ಒಂದು ಮಣವನ್ನು ಹೊರುತ್ತಾನೆ- ಒಂದು ಮಣ ಹೊರುತ್ತಾನೆ.

**೩. ತೃತೀಯಾ ವಿಭಕ್ತಿ**

೧. ಕರಣಾರ್ಥದಲ್ಲಿಯೂ ಕಾರಣಾರ್ಥದಲ್ಲಿಯೂ ಕರ್ಮಣಿ ಪ್ರಯೋಗದಲ್ಲಿ ಕರ್ತೃರ್ಥದಲ್ಲಿಯೂ ತೃತೀಯಾ ವಿಭಕ್ತಿ ಬರುತ್ತದೆ.

ಉದಾ : ಕರಣಕ್ಕೆ - ಲೇಖನಿಯಿಂದ ಬರೆಯುತ್ತಾನೆ.

ಕೊಡಲಿಯಿಂದ ಕಡಿದನು.

ಕಾರಣಕ್ಕೆ- ವಿದ್ಯೆಯಿಂದ ಕೀರ್ತಿ.

ಆರೋಗ್ಯದಿಂದ ಸುಖ.

ಇಲ್ಲಿ ವಿದ್ಯೆ, ಆರೋಗ್ಯ - ಇವು ಕಾರಕಗಳಲ್ಲ.

ಕರ್ಮಣಿ ಪ್ರಯೋಗದಲ್ಲಿ ಕರ್ತೃವಿಗೆ -

ಕವಿಯಿಂದ ಕಾವ್ಯ ಬರೆಯಲ್ಪಡುತ್ತದೆ.

ಪುಲಿಕೇಶಿಯಿಂದ ಶತ್ರುಗಳು ಜಯಿಸಲ್ಪಟ್ಟರು.

೨. ನಿರಂತರವಾಗಿ ಕ್ರಿಯೆ ನಡೆಯಿತೆಂಬ ಅರ್ಥವು ತೋರಿದರೆ ಕಾಲವಾಚಕ ಮಾರ್ಗವಾಚಕಗಳ ಮೇಲೆ ತೃತೀಯಾ ವಿಭಕ್ತಿ ಬರುತ್ತದೆ.

ಉದಾ : ಒಂದು ತಿಂಗಳಿಂದ ವ್ಯಾಕರಣವನ್ನು ಓದುತ್ತಾನೆ.

ಒಂದು ಹರದಾರಿಯಿಂದ ಭಜನೆಮಾಡುತ್ತಾ ಬಂದನು.

೨. ಸಕರ್ಮಕಧಾತುಗಳು ಪ್ರೇರಣಾರ್ಥದಲ್ಲಿದ್ದಾಗ ಪ್ರೇರ್ಯಕರ್ತೃ ವಾಚಕದ ಮೇಲೆ ತೃತೀಯಾ ವಿಭಕ್ತಿ ಬರುತ್ತದೆ. ಪ್ರೇಯಕರ್ತೃ=ಪ್ರೇರಣಾರ್ಥದಲ್ಲಿ 'ಇಸು' ಪ್ರತ್ಯಯ ಬರುವುದಕ್ಕೆ ಮೊದಲು ಯಾವುದು ಕರ್ತೃವೋ ಅದು.

ಉದಾ : ಶಿಲ್ಪಿಗಳು ಗುಡಿಯನ್ನು ಕಟ್ಟುತ್ತಾರೆ- ಅರಸನು ಶಿಲ್ಪಿಗಳಿಂದ ಗುಡಿಯನ್ನು ಕಟ್ಟಿಸುತ್ತಾನೆ.

ಅವಳು ಪಾಠವನ್ನು ಓದುತ್ತಾಳೆ- ಉಪಾಧ್ಯಾಯರು ಅವಳಿಂದ ಪಾಠವನ್ನು ಓದಿಸುತ್ತಾರೆ.

ಆದರೆ ಕೆಲವೆಡೆ ಪ್ರೇರ್ಯಕರ್ತೃವಾಚಕದ ಮೇಲೆ ದ್ವಿತೀಯಾ ವಿಭಕ್ತಿ ಬರುತ್ತದೆ.

ಉದಾ: ಅವನು ಗಾಡಿಯನ್ನು ಹತ್ತುತ್ತಾನೆ - ನಾನು ಅವನನ್ನು ಗಾಡಿಯನ್ನು ಹತ್ತಿಸುತ್ತೇನೆ.

ಅಕರ್ಮಕಧಾತು ಪ್ರೇರಣಾರ್ಥದಲ್ಲಿದ್ದಾಗ ಪ್ರೇರ್ಯಕರ್ತೃವಾಚಕದ ಮೇಲೆ ದ್ವಿತೀಯಾ ಬರುತ್ತದೆಯೆಂದು ಹಿಂದೆ ತಿಳಿಸಿದೆ.

೪. ಸಹಾರ್ಥಕ ಶಬ್ದಗಳ ಯೋಗವಿದ್ದರೆ ತೃತೀಯಾ ವಿಭಕ್ತಿ ಬರುತ್ತದೆ. ಆದರೆ 'ಒಡನೆ, ಸಂಗಡ, ಜೊತೆಗೆ' ಎಂಬ ಶಬ್ದಗಳಿದ್ದರೆ ಷಷ್ಠೀವಿಭಕ್ತಿ ಬರುತ್ತದೆ.

ಉದಾ: ಮಕ್ಕಳಿಂದ ಕೂಡಿ ತಾಯಿ ಬಂದಳು.

ಸೈನ್ಯದಿಂದ ಸಹಿತನಾಗಿ ರಾಜನು ನಡೆದನು.

ಮಕ್ಕಳೊಡನೆ ತಾಯಿ ಬಂದಳು.

ಸೈನ್ಯದೊಡನೆ ರಾಜನು ನಡೆದನು.

ಗೆಳೆಯನ ಸಂಗಡ ಅವನು ಮಾತಾಡಿದನು.

ನನ್ನ ಜೊತೆಗೆ ಅವನು ದುಡಿಯುತ್ತಾನೆ.

ಇಲ್ಲಿ ಷಷ್ಠೀ ವಿಭಕ್ತಿ ಬಂದಿದೆ.

**೪. ಚತುರ್ಥೀ ವಿಭಕ್ತಿ**

೧. ಸಂಪ್ರದಾನವಾಚಕದ ಮೇಲೆ ಚತುರ್ಥೀವಿಭಕ್ತಿ ಬರುತ್ತದೆ.

ಉದಾ : ಯಾಚಕನಿಗೆ ಭಿಕ್ಷೆಯನ್ನು ಹಾಕಿದನು.

ಅಗಸನಿಗೆ ಬಟ್ಟೆಯನ್ನು ಕೊಡುತ್ತಾನೆ.

ಸ್ನಾನಕ್ಕೆ ಹೋಗುತ್ತಾನೆ.

ಊಟಕ್ಕೆ ಕುಳಿತಿದ್ದಾನೆ.

೨. ಉದ್ದೇಶ ಮತ್ತು ಫಲಗಳ ವಾಚಕದ ಮೇಲೆ ಚತುರ್ಥೀವಿಭಕ್ತಿ ಬರುತ್ತದೆ.

ಉದಾ: ಉದ್ದೇಶ- **ತೇರಿಗೆ ಮರ, ಬಳೆಗೆ ಚಿನ್ನ, ಬಟ್ಟೆಗೆ ನೂಲು.**

ಫಲ- **ಕೇಡಿಗೆ ದುರ್ಬುದ್ಧಿ, ರೋಗಕ್ಕೆ ಅತ್ಯಾಹಾರ.**

೩. ಅಧಿಕರಣಾರ್ಥದ ಕಾಲವಾಚಕದ ಮೇಲೆ ಚತುರ್ಥೀ ಬರುತ್ತದೆ.

ಉದಾ: ಸಂಜೆಗೆ ಬರುತ್ತಾನೆ. ಪ್ರಾತಃಕಾಲ ಏಳಕ್ಕೆ ಹೊರಡುತ್ತಾನೆ.

೪. ರುಚಿ, ಅಸಹನೆ, ದ್ರೋಹ, ಭಯ, ನಾಚಿಕೆ, ಆಧಿಕ್ಯ, ಹಿತ, ಅಹಿತ, ಸಾದೃಶ್ಯ, ಪ್ರತಿನಿಧಿ - ಈ ಅರ್ಥದ ಶಬ್ದಗಳ ಯೋಗವಿದ್ದಲ್ಲಿ ಚತುರ್ಥೀ ವಿಭಕ್ತಿ ಬರುತ್ತದೆ.

ಉದಾ: ರುಚಿ- ನನಗೆ ಮಾವಿನ ಹಣ್ಣು ರುಚಿಸುತ್ತಧೆ. ಸೀತೆಗೆ ಈ ಬಣ್ಣ ಹಿಡಿಸುತ್ತದೆ.

ಅಸಹನೆ- ಕವಿ ಕವಿಗೆ ಹೊಟ್ಟೆಕಿಚ್ಚು ಪಡುತ್ತಾನೆ. ಕವಿಗೆ ಅಸೂಯೆ ಪಡುತ್ತಾನೆ.

ದ್ರೋಹ- ದುಷ್ಟರು ಒಳ್ಳೆಯವರಿಗೆ ದ್ರೋಹ ಮಾಡುತ್ತಾರೆ.

ಭಯ- ಅವನಿಗೆ ಭಯ. ಕಳ್ಳನಿಗೆ ಹೆದರಿಕೆ.

ನಾಚಿಕೆ- ಹುಡುಗಿಗೆ ನಾಚಿಕೆ.

ಆಧಿಕ್ಯ- ಇವನು ವಂಶಕ್ಕೆ ಹಿರಿಯ. ತಂದೆಯಾಯಿಗಳು ನಮಗೆ ಪೂಜ್ಯರು.

ಹಿತ- ಔಷಧ ರೋಗಿಗೆ ಹಿತ. ಹಾಲು ಮಗುವಿಗೆ ಒಳ್ಳೆಯದು.

ಅಹಿತ- ಆಲಸ್ಯ ಮನುಷ್ಯನಿಗೆ ಅಹಿತ. ಅಂತಃಕಲಹ ದೇಶಕ್ಕೆ ಕೆಟ್ಟದ್ದು.

ಸಾದೃಶ್ಯ- ತಾಯಿ ದೇವರಿಗೆ ಸಮಾನಳು. ಸುಭಾಷಿತ ಅಮೃತಕ್ಕೆ ಸದೃಶ.

ಪ್ರತಿನಿಧಿ- ಸಕ್ಕರೆಗೆ ಬೆಲ್ಲವನ್ನು ಬಳಸುತ್ತಾರೆ. ಅಕ್ಕಿಗೆ ಗೋಧಿಯನ್ನು ಸೇರಿಸುತ್ತಾರೆ.

೫. ಹೋಗು, ಬರು- ಎಂಬರ್ಥದ ಧಾತುವಿನ ಯೋಗವಿದ್ದಲ್ಲಿ ಕರ್ಮವಾಚಕದ ಮೇಲೆ ಚತುರ್ಥೀ ವಿಭಕ್ತಿ ಬರುವುದು.

ಉದಾ: ಮನೆಗೆ ಹೋದನು. ಕಛೇರಿಗೆ ಬಂದನು. ದೇವಸ್ಥಾನಕ್ಕೆ ಆಗಮಿಸಿದರು.

೬. ನಮಸ್ಕಾರಾರ್ಥದ ಕ್ರಿಯಾಪದವಿದ್ದಾಗ ಕರ್ಮವಾಚಕದ ಮೇಲೆ ದ್ವಿತೀಯೆಗೆ ಬದಲಾಗಿ ವಿಕಲ್ಪವಾಗಿ ಚತುರ್ಥೀ ವಿಭಕ್ತಿ ಬರುತ್ತದೆ.

ಉದಾ: ಗುರುವಿಗೆ ವಂದಿಸಿದಳು, ಗುರುವನ್ನು ವಂದಿಸಿದಳು.

ದೇವರಿಗೆ ನಮಸ್ಕರಿಸುತ್ತಾನೆ. ದೇವರನ್ನು ನಮಸ್ಕರಿಸುತ್ತಾನೆ.

ನಮಸ್ಕಾರಾರ್ಥದ ಕೃದಂತವಿದ್ದಾಗ ಚತುರ್ಥೀ ವಿಭಕ್ತಿ ಮಾತ್ರ.

ಉದಾ: ಗುರುವಿಗೆ ವಂದನೆ, ದೇವರಿಗೆ ನಮಸ್ಕಾರ.

೭. ತಿನ್ನು, ಕುಡಿ, ತಿಳಿ- ಈ ಅರ್ಥದ ಕ್ರಿಯಾಪದಗಳು ಪ್ರೇರಣಾರ್ಥದಲ್ಲಿ ಇದ್ದಾಗ ಪ್ರೇರ್ಯಕರ್ತೃವಾಚಕದ ಮೇಲೆ ಚತುರ್ಥೀ ವಿಭಕ್ತಿ ಬರುತ್ತದೆ.

ಉದಾ: ಮಗು ಹಣ್ಣನ್ನು ತಿನ್ನುತ್ತದೆ- ತಾಯಿ ಮಗುವಿಗೆ ಹಣ್ಣನ್ನು ತಿನ್ನಿಸಿದಳು.

ರೋಗಿ ಔಷಧವನ್ನು ಕುಡಿದನು- ವೈದ್ಯನು ರೋಗಿಗೆ ಔಷಧವನ್ನು ಕುಡಿಸಿದನು.

ಹುಡುಗನು ಅರ್ಥವನ್ನು ತಿಳಿದನು- ಉಪಾಧ್ಯಾಯನು ಹುಡುಗನಿಗೆ ಅರ್ಥವನ್ನು ತಿಳಿಸಿದನು.

೮. ಗುಣಸ್ವಭಾವಾದಿಗಳಿಂದ ತರತಮ ಭಾವವನ್ನು ತಿಳಿಸುವಾಗ ಯಾವುದು ಅವಧಿಯೋ ಅದರ ಮೇಲೆ ಚತುರ್ಥೀ ವಿಭಕ್ತಿ ಬರುತ್ತದೆ. ಅದರ 'ಎ' ಕಾರಕ್ಕೆ ವಿಕಲ್ಪವಾಗಿ ಊ, ಇಂತ ಎಂಬ ಆದೇಶಗಳು ಬರುತ್ತವೆ.

ಉದಾ: ಅವನಿಗೆ ಇವನು ಚತುರ ಮರಕ್ಕೆ ಕಬ್ಬಿಣ ಗಟ್ಟಿ

ಅವನಿಗೂ ಇವನು ಚತುರ ಮರಕ್ಕೂ ಕಬ್ಬಿಣ ಗಟ್ಟಿ

ಅವನಿಗಿಂತ ಇವನು ಚತುರ ಮರಕ್ಕಿಂತ ಕಬ್ಬಿಣ ಗಟ್ಟಿ

**೫. ಪಂಚಮೀ ವಿಭಕ್ತಿ**

೧. ಅಪಾದಾನ ವಾಚಕದ ಮೇಲೆ ಪಂಚಮೀ ವಿಭಕ್ತಿ ಬರುತ್ತದೆ.

ಉದಾ: **ಮರದ ದೆಸೆಯಿಂದ** (ಮರದಿಂದ) ಎಲೆಗಳು ಉದುರಿದುವು

**ಮೋಡದ ದೆಸೆಯಿಂದ** (ಮೋಡದಿಂದ) ಮಳೆ ಬಿದ್ದಿತು.

೨. ಕಾರಣವಾಚಕದ ಮೇಲೆ ಪಂಚಮೀ ವಿಭಕ್ತಿ ವಿಕಲ್ಪವಾಗಿ ಬರುತ್ತದೆ (ಅದು ಬರದಾಗ ತೃತೀಯಾ ಬರುತ್ತದೆ).

**ರಾವಣನ ದೆಸೆಯಿಂದ** ಸೀತೆಗೆ ವಿಪತ್ತು ಬಂದಿತು ( ರಾವಣನಿಂದ)

**ಜ್ವರದ ದೆಸೆಯಿಂದ** ಅವನು ದುರ್ಬಲನಾಗಿದ್ದಾನೆ (ಜ್ವರದಿಂದ)

೩. ಭಯಾರ್ಥದ ಪದವಿದ್ದಾಗ ಕರಣವಾಚಕದ ಮೇಲೆ ಪಂಚಮೀ, ಚತುರ್ಥೀ, ತೃತೀಯಾ ವಿಭಕ್ತಿಗಳು ಬರುತ್ತವೆ.

ಉದಾ: **ಹುಲಿಯ ದೆಸೆಯಿಂದ** ಹೆದರುತ್ತಾನೆ, **ಹುಲಿಗೆ** ಹೆದರುತ್ತಾನೆ, **ಹುಲಿಯಿಂದ** ಹೆದರುತ್ತಾನೆ.

೪. ರಕ್ಷಣಾರ್ಥದ ಪದವಿದ್ದಾಗ ರಕ್ಷಣೆಗೆ ನಿಮಿತ್ತವಾದ ಭಯಕ್ಕೆ ಯಾವುದು ಕಾರಣವೊ ಆ ಶಬ್ದದ ಮೇಲೆ ಪಂಚಮೀ ವಿಭಕ್ತಿ ಬರುತ್ತದೆ.

**ಹಾವಿನ ದೆಸೆಯಿಂದ** ರಕ್ಷಿಸಿದನು

**ವಿಪತ್ತಿನ ದೆಸೆಯಿಂದ** ಉಳಿಸಿದನು

**ಕಷ್ಟದ ದೆಸೆಯಿಂದ** ಪಾರು ಮಾಡಿದನು

(ಹಾವಿನಿಂದ, ವಿಪತ್ತಿನಿಂದ, ಕಷ್ಟದಿಂದ- ಎಂಬಿವು ಪಂಚಮೀ ವಿಭಕ್ತಿಯ ರೂಪಾಂತರಗಳೆಂದು ಹಿಂದೆ ತಿಳಿಸಿದೆ).

## ೬. ಷಷ್ಠೀ ವಿಭಕ್ತಿ

೧. ಭಾವಕೃದಂತದ ಯೋಗವಿದ್ದಾಗ ಕರ್ತೃಕರ್ಮವಾಚಕಗಳ ಮೇಲೆ ಷಷ್ಠೀವಿಭಕ್ತಿ ಬರುತ್ತದೆ. ಇದು ಕಾರಕ ವಿಭಕ್ತಿ.

ಕರ್ತೃ- **ರಾಮನ** ಆಚರಣೆ, **ಹುಡುಗನ** ಓದು, **ಅವಳ** ಲೇಖನ, **ಮಗುವಿನ** ಆಟ, **ದೊಡ್ಡವರ** ಹೇಳಿಕೆ.

ಕರ್ಮ- **ಗೃಹಗಳ** ನಿರ್ಮಾಣ, **ಗ್ರಂಥದ** ರಚನೆ, **ಕಾವ್ಯದ** ವಾಚನ, **ಮನೆಯ** ನೋಟ, **ಪುಸ್ತಕದ** ಓದು.

ಭಾವಕೃದಂತದ ಯೋಗವಿದ್ದಾಗ ಕರ್ತೃವಾಚಕದ ಮೇಲೆ ತೃತೀಯಾ ವಿಭಕ್ತಿಯೂ ಬರುವುದುಂಟು.

ಉದಾ: **ಮಗುವಿನಿಂದ** ಆಟ ನಡೆಯುತ್ತದೆ. **ದೊಡ್ಡವರಿಂದ** ಹೇಳಿಕೆ ಯಾಗುತ್ತದೆ. ಇದೂ ಕಾರಕ ವಿಭಕ್ತಿ.

೨. ಎರಡು ವಸ್ತುಗಳಿರುವ ಸಂಬಂಧವು ತೋರುವಾಗ ಷಷ್ಠೀವಿಭಕ್ತಿ ಬರುತ್ತದೆ. ಸಂಬಂಧವು ಅವಯವ ಸಂಬಂಧ, ಸಂಯೋಗ ಸಂಬಂಧ, ಜನ್ಯಜನಕ ಭಾವ ಸಂಬಂಧ- ಹೀಗೆ ಹಲವಾರು ಬಗೆ.

ಉದಾ : ಅವಯವ ಸಂಬಂಧ - **ಮರದ** ಕೊಂಬೆ

ಸಂಯೋಗ ಸಂಬಂಧ - **ನಲ್ಲಿಯ** ನೀರು

ಜನ್ಯಜನಕಭಾವ ಸಂಬಂಧ - **ದಶರಥನ** ಮಗ

ಹೀಗೆಯೇ ನನ್ನ ಮನೆ, ಸೀತೆಯ ತಂಗಿ, ಅವನ ಗುಣ, ಕಲ್ಲಿನ ಪ್ರತಿಮೆ, ಅಕ್ಕಿಯ ಹಿಟ್ಟು, ಕಾಲಿನ ಕಡಗ, ಹಳ್ಳಿಯ ಮುಂದೆ, ಮರದ ಕೆಳಗೆ, ರಸ್ತೆಯ ಬಲಗಡೆ,

ದೀಪದ ಬೆಳಕು, ಪುಸ್ತಕದ ಕಾಗದ, ಅವನ ಮಿತ್ರ, ನನ್ನ ಬಳಿ, ಗೋಧಿಯ ಬೆಲೆ, ಕಾವ್ಯದ ಸೌಂದರ್ಯ.

ವಿಶೇಷ: ಸಂಬಂಧವು ಎರಡು ವಸ್ತುಗಳಲ್ಲಿಯೂ ಇರುತ್ತದೆಯಾದರೂ ಯಾವುದಕ್ಕೆ ಕ್ರಿಯಾಪದದೊಡನೆ ಅನ್ವಯವಿಲ್ಲವೋ ಅದರ ಮೇಲೆ ಷಷ್ಠೀವಿಭಕ್ತಿ ಬರುತ್ತದೆ.

ಉದಾ : ಮರದ ಕೊಂಬೆ ಅಲ್ಲಾಡುತ್ತದೆ.

ಇಲ್ಲಿ ಮರಕ್ಕೂ ಕೊಂಬೆಗೂ ಅವಯವ ಸಂಬಂಧ. ಷಷ್ಠಿಯು 'ಮರ' ಶಬ್ದದ ಮೇಲೆ ಬರುತ್ತದೆ. ಕೊಂಬೆ ಶಬ್ದದ ಮೇಲೆ ಬರುವುದಿಲ್ಲ. ಏಕೆಂದರೆ ಕೊಂಬೆಗೆ ಕ್ರಿಯಾನ್ವಯವಿದ್ದು, ಅದು ಅಲ್ಲಾಡುವ ಕ್ರಿಯೆಗೆ ಕರ್ತೃವಾಗಿದೆ. ಮರಕ್ಕೆ ಕ್ರಿಯೆಯಲ್ಲಿ ಅನ್ವಯವಿಲ್ಲ. ಹೀಗೆಯೇ -

ಮರದ ಕೊಂಬೆಯನ್ನು ಕಡಿಯುತ್ತಾನೆ
ಮರದ ತೊಗಟೆಯಿಂದ ನಾರನ್ನು ಮಾಡುತ್ತಾನೆ
ಮರದ ಹಣ್ಣಿಗೆ ಹಕ್ಕಿ ಆಸೆ ಪಡುತ್ತದೆ.
ಮರದ ತುದಿಯಿಂದ ಹನಿ ಉದುರಿತು.
ಮರದ ಬುಡದಲ್ಲಿ ಕುಳಿತಿದ್ದಾನೆ.

ಮುಂತಾದ ಸ್ಥಳಗಳಲ್ಲಿ ಊಹಿಸಿಕೊಳ್ಳಬೇಕು.

ಇದು ಕಾರಕ ವಿಭಕ್ತಿಯಲ್ಲ.

### ೭. ಸಪ್ತಮೀ ವಿಭಕ್ತಿ

೧. ಅಧಿಕರಣವಾಚಕದ ಮೇಲೆ ಸಪ್ತಮೀವಿಭಕ್ತಿ ಬರುತ್ತದೆ.

ಉದಾ : **ಎಳ್ಳಿನಲ್ಲಿ** ಎಣ್ಣೆ ಇದೆ.
**ತೊಟ್ಟಿಲಲ್ಲಿ** ಮಗು ಮಲಗಿದೆ.
**ನೀರಿನಲ್ಲಿ** ಮೀನುಗಳಿವೆ.
**ಹೂವಿನಲ್ಲಿ** ಸುಗಂಧವಿದೆ.
**ವ್ಯಾಕರಣದಲ್ಲಿ** ಅವನಿಗೆ ತಿಳಿವಳಿಕೆ ಇದೆ.

೨. ಸಮುದಾಯದಿಂದ ಒಂದನ್ನು ಬೇರ್ಪಡಿಸಿ ಹೇಳುವಾಗ ಆ ಸಮುದಾಯ ವಾಚಕದ ಮೇಲೆ ಸಪ್ತಮೀವಿಭಕ್ತಿ ಬರುತ್ತದೆ.

**ಭಾರತೀಯರಲ್ಲಿ** ಸಿಖ್ಖರು ಶೂರರು.
**ಹಸುಗಳಲ್ಲಿ** ಬಿಳಿಯದು ನನ್ನದು.

**ಅವರಲ್ಲಿ** ಹಾಡತಕ್ಕವಳು ನನ್ನ ತಂಗಿ.

೩. ನಿಪುಣಾರ್ಥಕ ಶಬ್ದಗಳ ಯೋಗವಿದ್ದಲ್ಲಿ ಸಪ್ತಮೀವಿಭಕ್ತಿ ಬರುತ್ತದೆ.

**ವ್ಯಾಪಾರದಲ್ಲಿ** ಚತುರ

**ಸಂಗೀತದಲ್ಲಿ** ಕುಶಲ

**ವಿದ್ಯೆಯಲ್ಲಿ** ಜಾಣ

**ಚಿತ್ರದಲ್ಲಿ** ನಿಪುಣ

ವಿಶೇಷ : ಕಾಲವಾಚಕದ ಮೇಲಿನ ಸಪ್ತಮೀವಿಭಕ್ತಿಗೆ ವಿಕಲ್ಪವಾಗಿ ಲೋಪ ಬರುತ್ತದೆ.

ಉದಾ : **ರಾತ್ರಿ** ಕತ್ತಲಿರುತ್ತದೆ (ರಾತ್ರಿಯಲ್ಲಿ)

**ಹಗಲು** ಹೋಗೋಣ (ಹಗಲಿನಲ್ಲಿ)

**ಈ ದಿನ** ಶಾಲೆಗೆ ರಜಾ ಇದೆ (ಈ ದಿನದಲ್ಲಿ)

**ಸೋಮವಾರ** ಬರುತ್ತೇನೆ (ಸೋಮವಾರದಲ್ಲಿ)

ರಾತ್ರಿಯಲ್ಲಿ, ಹಗಲಿನಲ್ಲಿ - ಇತ್ಯಾದಿ ರೂಪಗಳೂ ಉಂಟು.

## ವಿಭಕ್ತಿ ಪಲ್ಲಟ

ಒಂದು ವಿಭಕ್ತಿಗೆ ಪ್ರತಿಯಾಗಿ ಕೆಲವು ಕಡೆ ಮತ್ತೊಂದನ್ನು ಪ್ರಯೋಗಿಸುವುದುಂಟು. ಇದಕ್ಕೆ ವಿಭಕ್ತಿಪಲ್ಲಟವೆಂದು ಹೆಸರು.

ಉದಾ : ೧. ದ್ವಿತೀಯೆಗೆ ಚತುರ್ಥೀ -

ಮನೆಯನ್ನು ಸೇರಿದನು - ಮನೆಗೆ ಸೇರಿದನು

ಬೆಟ್ಟವನ್ನು ಹತ್ತಿದನು - ಬೆಟ್ಟಕ್ಕೆ ಹತ್ತಿದನು

೨. ತೃತೀಯೆಗೆ ಸಪ್ತಮೀ -

ಕೊಡಲಿಯಿಂದ ಕಡಿದನು - ಕೊಡಲಿಯಲ್ಲಿ ಕಡಿದನು.

ಕಿವಿಯಿಂದ ಕೇಳುತ್ತಾನೆ - ಕಿವಿಯಲ್ಲಿ ಕೇಳುತ್ತಾನೆ

೩. ಸಪ್ತಮಿಗೆ ಚತುರ್ಥೀ -

ಹಳ್ಳದಲ್ಲಿ ಬಿದ್ದನು - ಹಳ್ಳಕ್ಕೆ ಬಿದ್ದನು

ನಿಮಿಷದಲ್ಲಿ ಒಂದು ಮೈಲಿ ಹೋಗುತ್ತದೆ - ನಿಮಿಷಕ್ಕೆ ಒಂದು ಮೈಲಿ ಹೋಗುತ್ತದೆ.

ಸಂಜೆಯಲ್ಲಿ ಬಂದನು - ಸಂಜೆಗೆ ಬಂದನು

ಹತ್ತು ಘಂಟೆಯಲ್ಲಿ ಮಲಗುತ್ತಾನೆ - ಹತ್ತು ಘಂಟೆಗೆ ಮಲಗುತ್ತಾನೆ.

೪. ಷಷ್ಠಿಗೆ ಚತುರ್ಥೀ :

ಮನೆಯ ಯಜಮಾನ - ಮನೆಗೆ ಯಜಮಾನ

ನಮ್ಮ ಉಪಾಧ್ಯಾಯರು - ನಮಗೆ ಉಪಾಧ್ಯಾಯರು

ಅವನ ಬುದ್ಧಿ ಸೂಕ್ಷ್ಮ - ಅವನಿಗೆ ಬುದ್ಧಿ ಸೂಕ್ಷ್ಮ

ಇದು ಮಗುವಿನ ಆಹಾರ- ಇದು ಮಗುವಿಗೆ ಆಹಾರ

ವಿಶೇಷ : ೧. ಸಂಬಂಧಾರ್ಥದಲ್ಲಿ ಷಷ್ಠೀ ಚತುರ್ಥಿಗಳು ಬಂದರೂ ಕೆಲವೆಡೆ ಸೂಕ್ಷ್ಮವಾದ ಅರ್ಥಭೇದವಿರುತ್ತದೆ.

**ದಶರಥನ** ನಾಲ್ವರು ಮಕ್ಕಳು

(ಗೊತ್ತಿರುವ ಸಂಬಂಧದ ಅನುವಾದ)

**ದಶರಥನಿಗೆ** ನಾಲ್ವರು ಮಕ್ಕಳು

(ಹೊಸದಾಗಿ ಸಂಬಂಧದ ಜ್ಞಾಪನೆ)

೨. ಕೆಲವೆಡೆ ಚತುರ್ಥೀ ವಿಭಕ್ತಿ ಬರುವುದಿಲ್ಲ.

ಇದು **ನನ್ನ** ಪುಸ್ತಕ. **ಹತ್ತಿಯ** ಬಟ್ಟೆ.

೩. ಕೆಲವೆಡೆ ಷಷ್ಠೀ ವಿಭಕ್ತಿ ಬರುವುದಿಲ್ಲ.

**ಅವನಿಗೆ** ಬುದ್ಧಿ ಇದೆ. **ಆನೆಗೆ** ಸೊಂಡಿಲು ಇದೆ.

ಸಂಬಂಧವು ಹೊಸದಾಗಿ ಜ್ಞಾಪ್ಯವಾದಾಗ ಷಷ್ಠಿಗೆ ಬದಲು ಚತುರ್ಥೀವಿಭಕ್ತಿ ಬರುತ್ತದೆಯೆಂದು ಸಾಮಾನ್ಯ ನಿಯಮ.

## ಕಾರಕ ವಿವಕ್ಷೆ

ಕರ್ಮಾದಿಕಾರಕಗಳನ್ನು ಕೆಲವು ಸಂದರ್ಭಗಳಲ್ಲಿ ಕರ್ತೃವಾಗಿ ಪ್ರಯೋಗಿಸುವುದುಂಟು. ಇದು ವಿವಕ್ಷೆಯನ್ನನುಸರಿಸುತ್ತದೆ. ವಿವಕ್ಷೆಯೆಂದರೆ ಹೇಳತಕ್ಕವನ ಇಚ್ಛೆ.

ಉದಾ: ೧. ಕರ್ಮವು ಕರ್ತೃವಾಗುವುದು :

ಬಟ್ಟೆಯನ್ನು ಹರಿಯುತ್ತಾನೆ - **ಬಟ್ಟೆ** ಹರಿಯುತ್ತದೆ

ಕೋಲನ್ನು ಮುರಿಯುತ್ತಾನೆ- **ಕೋಲು** ಮುರಿಯುತ್ತದೆ

೨. ಕರಣವು ಕರ್ತೃವಾಗುವುದು :

ಕತ್ತಿಯಿಂದ ತುಂಡರಿಸುತ್ತಾನೆ - **ಕತ್ತಿ** ತುಂಡರಿಸುತ್ತದೆ

ಲೇಖನಿಯಿಂದ ಬರೆಯುತ್ತಾನೆ- **ಲೇಖನಿ** ಬರೆಯುತ್ತದೆ

೩. ಅಧಿಕರಣವು ಕರ್ತೃವಾಗುವುದು :

ಪಾತ್ರೆಯಲ್ಲಿ ಬೇಯಿಸುತ್ತಾನೆ - **ಪಾತ್ರೆ** ಬೇಯಿಸುತ್ತದೆ

ಹೊಳೆಯಲ್ಲಿ ದೋಣಿಯನ್ನು ನಡೆಸುತ್ತಾನೆ- **ಹೊಳೆ** ದೋಣಿಯನ್ನು ನಡೆಸುತ್ತದೆ.

೪. ವಿವಕ್ಷಾನುಸಾರವಾಗಿ ಇತರ ಕಾರಕಗಳಾಗಿಯೂ ಬದಲಾವಣೆ ಯಾಗಬಹುದು.

ಅಧಿಕರಣವು ಕರಣವಾಗುವುದು :

**ರೈಲಿನಲ್ಲಿ** ಹೋಗುತ್ತಾನೆ - **ರೈಲಿನಿಂದ** ಹೋಗುತ್ತಾನೆ.

ಕರಣವು ಅಧಿಕರಣವಾಗುವುದು :

**ಕೈಯಿಂದ** ಕೊಡುತ್ತಾನೆ - **ಕೈಯಲ್ಲಿ** ಕೊಡುತ್ತಾನೆ.

ವಿಶೇಷ : ೧. ಕಾರಣ, ನಿಮಿತ್ತ, ಹೇತು - ಮುಂತಾದ ಶಬ್ದಗಳನ್ನು ಸರ್ವನಾಮದೊಡನೆ ಪ್ರಯೋಗಿಸಿದಾಗ ದ್ವಿತೀಯಾ, ಷಷ್ಠೀ ವಿಭಕ್ತಿಗಳನ್ನುಳಿದು ಇತರ ಎಲ್ಲ ವಿಭಕ್ತಿಗಳೂ ಕಾರಣಾರ್ಥದಲ್ಲಿ ಬರುತ್ತವೆ.

ಉದಾ : ಪ್ರ. ಈ ಕಾರಣ, ಯಾವ ಕಾರಣ

ತೃ. ಈ ನಿಮಿತ್ತದಿಂದ, ಆ ನಿಮಿತ್ತದಿಂದ

ಚ. ಈ ಕಾರಣಕ್ಕೆ, ಯಾವ ಕಾರಣಕ್ಕೆ

ಪಂ. ಈ ಹೇತುವಿನ ದೆಸೆಯಿಂದ, ಈ ಕಾರಣದ ದೆಸೆಯಿಂದ

ಸ. ಯಾವ ನಿಮಿತ್ತದಲ್ಲಿ, ಯಾವ ಕಾರಣದಲ್ಲಿ

೨. ಕಾರಣಾದಿ ಶಬ್ದಗಳ ಪ್ರಯೋಗವಿಲ್ಲದಿದ್ದಾಗ ಸರ್ವನಾಮದ ಮೇಲೆ ತೃತೀಯಾ, ಚತುರ್ಥೀ, ಪಂಚಮಿಗಳು ಮಾತ್ರ ಕಾರಣಾರ್ಥದಲ್ಲಿ ಬರುತ್ತವೆ.

ಉದಾ : ಪ್ರ. ಯಾವುದರಿಂದ, ಏತರಿಂದ

ಚ. ಯಾವುದಕ್ಕೆ, ಏತಕ್ಕೆ, ಏಕೆ.

ಪಂ. ಯಾವುದರ ದೆಸೆಯಿಂದ, ಏತರ ದೆಸೆಯಿಂದ



## ಸ್ತ್ರೀಪ್ರತ್ಯಯಗಳು

ಸ್ತ್ರೀಲಿಂಗವನ್ನು ಸೂಚಿಸುವುದಕ್ಕಾಗಿ ಪ್ರಾತಿಪದಿಕದ ಮೇಲೆ ಬರುವ ಪ್ರತ್ಯಯಕ್ಕೆ ಸ್ತ್ರೀಪ್ರತ್ಯಯವೆಂದು ಹೆಸರು. ಸ್ತ್ರೀ ಪ್ರತ್ಯಯಾಂತ ಶಬ್ದದ ಮೇಲೆ ಕರ್ತೃ ಕರ್ಮಾದ್ಯರ್ಥಗಳಲ್ಲಿ ಬೇರೆ ಬೇರೆ ವಿಭಕ್ತಿಗಳು ಬರುತ್ತವೆ. ಕೆಳಗೆ ಕೆಲವು ಸ್ತ್ರೀ ಪ್ರತ್ಯಯಗಳನ್ನೂ ಅವನ್ನು ಸೇರಿಸಿದ ನಿಷ್ಪನ್ನ ರೂಪಗಳನ್ನೂ ಪರಿಚಯ ಮಾಡಿಕೊಡಲಾಗಿದೆ.

| | ಸ್ತ್ರೀ ಪ್ರತ್ಯಯ | ನಿಷ್ಪನ್ನರೂಪ |
|---|---|---|
| ೧. | **ಅವಳು** (ಏಕವಚನದಲ್ಲಿ) | ದೊಡ್ಡವಳು, ಚಿಕ್ಕವಳು, ಹೇಳುವವಳು, ನಾಲ್ಕನೆಯವಳು, ಧೈರ್ಯದವಳು, ಎಷ್ಟರವಳು, ಹೊರಗಿನವಳು (ಬಹುವಚನದಲ್ಲಿ ದೊಡ್ಡವರು ಇತ್ಯಾದಿ). |
| ೨. | **ಅಳು** (ಏಕವಚನದಲ್ಲಿ) | ಚದುರಳು, ಜಾಣಳು, ಇನಿಯಳು, ಬಿಳಿಯಳು, ಮಗಳು, ಒಬ್ಬಳು, ಓರ್ವಳು (ಬಹುವಚನದಲ್ಲಿ ಚದುರರು ಇತ್ಯಾದಿ. ಮಗಳು = ಮಕ್ಕಳು). |
| ೩. | **ಇ** | ಅರಸಿ, ಹುಡುಗಿ, ಮುದುಕಿ, ಕುರುಡಿ, ಮೂಕಿ, ಹೆಳವಿ, ನಿಡುಗಣ್ಣೆ. |
| ೪. | **ಎ** | ಗುಣವಂತೆ, ಚದುರೆ, ಜಾಣೆ, ಇನಿಯೆ, ಹೆಡ್ಡೆ, ದಡ್ಡೆ, ತುಂಟೆ. |
| ೫. | **ತಿ** | ಗೆಳತಿ, ಕುಂಬಾರತಿ, ಗೊಲ್ಲತಿ, ಮಾಲೆಗಾರ್ತಿ, ಮಾತುಗಾರ್ತಿ, ಕತೆಗಾರ್ತಿ,ಬರಹಗಾರ್ತಿ, ಮಡಿವಾಳತಿ. |
| ೬. | **ಇತಿ** | ಬೀಗಿತಿ, ತಳವಾರಿತಿ, ಕನ್ನಡಿತಿ. |
| ೭. | **ಇತ್ತಿ** | ಒಕ್ಕಲಗಿತ್ತಿ, ಹೂವಾಡಿಗಿತ್ತಿ, ಬೆಸ್ತಗಿತ್ತಿ. |

## ಸಂಸ್ಕೃತ ಸ್ತ್ರೀಲಿಂಗ ಶಬ್ದಗಳು

ಸಂಸ್ಕೃತದಲ್ಲಿ ಹ್ರಸ್ವ ಅಕಾರಾಂತವಾದ ಸ್ತ್ರೀಲಿಂಗವಲ್ಲ. ಸಂಸ್ಕೃತ ಸ್ತ್ರೀಲಿಂಗ ಶಬ್ದದ ಕಡೆಯ ಆ ಕಾರವು ಕನ್ನಡದಲ್ಲಿ ಎಕಾರವಾಗುತ್ತದೆ. ಉಳಿದ ದೀರ್ಘಗಳು ಹ್ರಸ್ವವಾಗುತ್ತವೆ.

ಉದಾ : ಗಂಗಾ =ಗಂಗೆ, ಅಂಗನಾ=ಅಂಗನೆ, ಪಾರ್ವತೀ = ಪಾರ್ವತಿ,

ದೇವೀ = ದೇವಿ, ವಧೂ, ವಧು, ಚಮೂ = ಚಮು.

ಹೆಚ್ಚಿನ ವಿವರಗಳನ್ನು ತದ್ಭವ ಪ್ರಕರಣದಲ್ಲಿ ಬರೆದಿದೆ.

ಈಚೆಗೆ ಹೊಸಗನ್ನಡದಲ್ಲಿ ವಿಶೇಷವಾಗಿ ಅನೇಕ ಸಂಸ್ಕೃತ ಶಬ್ದಗಳು ಬಳಕೆಗೆ ಬರುತ್ತಿವೆ. ಅಂತಹ ಕೆಲವು ಶಬ್ದಗಳನ್ನೂ ವ್ಯಾಕರಣ ನಿಯಮದಂತೆ ಅವುಗಳ ಸ್ತ್ರೀಲಿಂಗ ರೂಪಗಳನ್ನು ಕೆಳಗೆ ಬರೆದಿದೆ.

ಅಧ್ಯಕ್ಷ = ಅಧ್ಯಕ್ಷೆ

ಸಚಿವ = ಸಚಿವೆ

ನಿರ್ದೇಶಕ = ನಿರ್ದೇಶಿಕೆ

ಸಹಾಯಕ = ಸಹಾಯಿಕೆ

ಸಹಾಯಕ ನಿರ್ದೇಶಕ - ಸಹಾಯಕ ನಿರ್ದೇಶಿಕೆ

ಅಧ್ಯಾಪಕ = ಅಧ್ಯಾಪಿಕೆ

ಉಪಾಧ್ಯಾಯ = ಉಪಾಧ್ಯಾಯೆ, ಉಪಾಧ್ಯಾಯಿ (ಉಪಾಧ್ಯಾಯಿನಿ)

ಆಚಾರ್ಯ = ಆಚಾರ್ಯೆ

ಉಪನ್ಯಾಸಕ = ಉಪನ್ಯಾಸಿಕೆ

ಕವಿ = ಕವಿ

ಕವಯಿತೃ = ಕವಯಿತ್ರಿ

ನಿರ್ಮಾತೃ = ನಿರ್ಮಾತ್ರಿ

ಮಂತ್ರಿ = ಮಂತ್ರಿಣಿ

ಅಧಿಕಾರಿ = ಅಧಿಕಾರಿಣಿ

ಕಾರ್ಯದರ್ಶಿ = ಕಾರ್ಯದರ್ಶಿನಿ

ರಚಯಿತೃ = ರಚಯಿತ್ರಿ

ಕರ್ತೃ = ಕರ್ತ್ರಿ

ಬಾಲಕ = ಬಾಲಿಕೆ

ಸಂಪಾದಕ = ಸಂಪಾದಿಕೆ

ಪರಿಶೀಲಕ = ಪರಿಶೀಲಿಕೆ

ಸಂದರ್ಶಕ = ಸಂದರ್ಶಿಕೆ

ನಿರ್ವಾಹಕ = ನಿರ್ವಾಹಿಕೆ

ವಾಹಕ = ವಾಹಿಕೆ

ಪ್ರೇಕ್ಷಕ = ಪ್ರೇಕ್ಷಿಕೆ

ಸಹಾಯಕಾರಿ=ಸಹಾಯಕಾರಿಣಿ

ರೂಪದರ್ಶಿ = ರೂಪದರ್ಶಿನಿ

ಶಿಕ್ಷಕ = ಶಿಕ್ಷಿಕೆ

ನಿರ್ಮಾಪಕ = ನಿರ್ಮಾಪಿಕೆ

ವಿದ್ಯಾರ್ಥಿ = ವಿದ್ಯಾರ್ಥಿನಿ

ಸೇವಕ = ಸೇವಿಕೆ

ಲೇಖಕ = ಲೇಖಿಕೆ

ವಾಚಕ = ವಾಚಿಕೆ

ನಟ = ನಟಿ

ನರ್ತಕ = ನರ್ತಕಿ

ಅಭಿನೇತೃ = ಅಭಿನೇತ್ರಿ

ಗಗನಚಾರಿ = ಗಗನಚಾರಿಣಿ.

ವಿಶೇಷ : ೧. ಒಂದೇ ಮೂಲಾರ್ಥವಿರುವ ಸಮಾನರೂಪಗಳಾದ ಪುಂವಾಚಕ ಸ್ತ್ರೀವಾಚಕ ಸಮಾವೇಶವಿದ್ದಾಗ ಪುಲ್ಲಿಂಗರೂಪವು ಮಾತ್ರ ನಿಲ್ಲುತ್ತದೆ.

ಉದಾ : ವಿದ್ಯಾರ್ಥಿ ಮತ್ತು ವಿದ್ಯಾರ್ಥಿನಿ = ವಿದ್ಯಾರ್ಥಿಗಳು

ಜಾಣರು ಮತ್ತು ಜಾಣೆಯರು = ಜಾಣರು

ಹುಡುಗರು ಮತ್ತು ಹುಡುಗಿಯರು = ಹುಡುಗರು

ಮುದುಕರು ಮತ್ತು ಮುದುಕಿಯರು = ಮುದುಕರು

ಅಧ್ಯಾಪಕರು ಮತ್ತು ಅಧ್ಯಾಪಿಕೆಯರು = ಅಧ್ಯಾಪಕರು

ಇದಕ್ಕೆ ಏಕಶೇಷವೆಂದು ಹೆಸರು. ಇದು ದ್ವಂದ್ವ ಸಮಾಸಕ್ಕೆ ಅಪವಾದ. ಆದರೆ ವಿದ್ಯಾರ್ಥಿ ವಿದ್ಯಾರ್ಥಿನಿಯರು, ಹುಡುಗ ಹುಡುಗಿಯರು - ಎಂದು ಪ್ರಯೋಗಿಸುವುದೂ ರೂಢಿಯಲ್ಲಿದೆ.

೨. ಅಕಾರಾಂತ ಪುಲ್ಲಿಂಗಕ್ಕೆ 'ಅಳು' ಎಂಭ ಪ್ರತ್ಯಯವನ್ನು ಸೇರಿಸಿ ಸ್ತ್ರೀಲಿಂಗದಲ್ಲಿ ಪ್ರಯೋಗಿಸುವುದೂ ರೂಢಿಗೆ ಬಂದಿದೆ.

ಉದಾ : ಅಧ್ಯಕ್ಷಳು, ಅಧ್ಯಾಪಕಳು, ಸೇವಕಳು, ಶಿಕ್ಷಕಳು, ಲೇಖಕಳು, ಅಧ್ಯಕ್ಷಿಣಿ, ಅಧ್ಯಾಪಕಿ, ಸೇವಕಿ, ಶಿಕ್ಷಕಿ, ಲೇಖಕಿ - ಮುಂತಾದವು ಅಪಶಬ್ದಗಳು. □

## ತದ್ಧಿತಾಂತ ಪ್ರಕರಣ

ಪ್ರಾತಿಪದಿಕದ ಮೇಲೆ ವಿಭಕ್ತಿ ಪ್ರತ್ಯಯವು ಸೇರಿ ನಾಮಪದವಾಗುತ್ತದೆಯಷ್ಟೆ. ಈ ನಾಮಪದದ ಮೇಲೆ ಬೇರೆ ಬೇರೆ ಅರ್ಥದಲ್ಲಿ ಮತ್ತೆ ಕೆಲವು ಪ್ರತ್ಯಯಗಳು ಬರುತ್ತವೆ. ಇವುಗಳಿಗೆ ತದ್ಧಿತವೆಂದು ಹೆಸರು. ಇದು ಬಂದಾಗ ಹಿಂದಿನ ನಾಮ ಪದದ ವಿಭಕ್ತಿಗೆ ಲೋಪ ಬರುತ್ತದೆ.

ಉದಾ : ತಿಳಿದವನು ಎಂಬ ಅರ್ಥದಲ್ಲಿ ಇಗ ಎಂಬ ತದ್ಧಿತ ಬರುತ್ತದೆ.

ಕನ್ನಡವನ್ನು ತಿಳಿದವನು - ಕನ್ನಡವನ್ನು + ಇಗ = ಕನ್ನಡಿಗ

ತದ್ಧಿತಾಂತವು ನಾಮಪ್ರಕೃತಿ, ಅವ್ಯಯ ಎಂದು ಎರಡು ವಿಧ. ನಾಮ ಪ್ರಕೃತಿ (ಪ್ರಾತಿಪದಿಕ)ಯ ಮೇಲೆ ವಿಭಕ್ತಿ ಪ್ರತ್ಯಯವು ಸೇರಿ ನಾಮಪದವಾಗುತ್ತದೆ.

ಉದಾ : ನಾಮಪದಕ್ಕೆ - ಕನ್ನಡಿಗನನ್ನು , ಕನ್ನಡಿಗನಿಂದ

ಅವ್ಯಯಕ್ಕೆ - ಚಂದ್ರನಂತೆ, ಸಂಜೆಯತನಕ

### ೧. ತದ್ಧಿತಾಂತ ನಾಮಪ್ರಕೃತಿ

೧. ನಾಮಪದಗಳ ಮೇಲೆ ವಂತ, ಇಗ, ಗಾರ, ಕಾರ, ಅಡಿಗ ಮೊದಲಾದ

ತದ್ಧಿತ ಪ್ರತ್ಯಯಗಳು ಬೇರೆ ಬೇರೆ ಅರ್ಥದಲ್ಲಿ ಬರುತ್ತವೆ.

ಉದಾ :

| ನಾಮಪದ | ಅರ್ಥ | ತದ್ಧಿತಪ್ರತ್ಯಯ | | ತದ್ಧಿತಾಂತ |
|---|---|---|---|---|
| ಸಿರಿ | ಇವನಿಗೆ ಇದೆ | ವಂತ | = | ಸಿರಿವಂತ |
| ಹಣವು | ಇವನಿಗೆ ಇದೆ | ವಂತ | = | ಹಣವಂತ |
| ಕನ್ನಡವನ್ನು | ತಿಳಿದವನು | ಇಗ | = | ಕನ್ನಡಿಗ |
| ಕನ್ನಡ (ಕನ್ನಡ ದೇಶವು) | ಇವನಿಗೆ ಜನ್ಮಭೂಮಿ | ಇಗ | = | ಕನ್ನಡಿಗ |
| ಕೇಡನ್ನು | ಮಾಡತಕ್ಕವನು | ಇಗ | = | ಕೇಡಿಗ |
| ದವಸವನ್ನು | ಮಾರತಕ್ಕವನು | ಇಗ | = | ದವಸಿಗ |
| ಮಾಲೆಯನ್ನು | ಕಟ್ಟುವವನು | ಗಾರ | = | ಮಾಲೆಗಾರ |
| ಛಲವನ್ನು | ಹೊಂದಿದವನು | ಗಾರ | = | ಛಲಗಾರ |
| ಕೋಲನ್ನು | ಹಿಡಿದವನು | ಕಾರ | = | ಕೋಲುಕಾರ |
| ಓಲೆಯನ್ನು | ತರುವವನು | ಕಾರ | = | ಓಲೆಕಾರ |
| ಹೂವನ್ನು | ಕಟ್ಟುವವನು | ಆಡಿಗ | = | ಹೂವಾಡಿಗ |
| ಹಾವನ್ನು | ಆಡಿಸುವವನು | ಆಡಿಗ | = | ಹಾವಾಡಿಗ |
| ಮಡಿಯನ್ನು | ಮಾಡುವವನು | ಆಳ | = | ಮಡಿವಾಳ |
| ಕರಿದನ್ನು | ಉಳ್ಳವನು | ಕ | = | ಕರಿಕ |
| ಬಿಳಿದನ್ನು | ಉಳ್ಳವನು | ಕ | = | ಬಿಳಿಕ |
| ಮಾತನ್ನು | ಹೆಚ್ಚು ಆಡುವವನು | ಆಳಿ | = | ಮಾತಾಳಿ |
| ಓದನ್ನು | ಹೆಚ್ಚು ಆಚರಿಸುವವನು | ಆಳಿ | = | ಓದಾಳಿ |
| ಲಂಚವನ್ನು | ತೆಗೆದುಕೊಳ್ಳುವವನು | ಗುಳಿ | = | ಲಂಚಗುಳಿ |

ಹೀಗೆಯೇ ಲೆಕ್ಕಿಗ, ಗಾಣಿಗ, ಕಂಚುಗಾರ, ಮೋಸಗಾರ, ಬೇಟೆಗಾರ, ಕಮ್ಮಾರ್ರ, ಲಂಚವಣಿಗ, ಹರಿಕಾರ, ಗುರಿಕಾರ, ಜೂದಾಳಿ, ಮೊದಲಾದ ತದ್ಧಿತಾಂತಗಳನ್ನು ತಿಳಿಯಬೇಕು.

೨. ಷಷ್ಠ್ಯಂತದ ಮೇಲೆ ಭಾವಾರ್ಥದಲ್ಲಿ **ತನ, ಇಕೆ, ಉ** - ಎಂಬ ಪ್ರತ್ಯಯಗಳು ಬರುತ್ತವೆ. ಇಲ್ಲಿ ಭಾವವೆಂದರೆ ಸ್ವಭಾವ, ಗುಣ ಧರ್ಮ; ಕ್ರಿಯೆಯಲ್ಲ.

ಉದಾ : ತನ - ಜಾಣತನ, ಭಾವ = ಜಾಣತನ.

ಹೀಗೆಯೇ ಹೆಡ್ಡತನ, ಅರಸುತನ, ಚದುರತನ, ಆಳುತನ ಇತ್ಯಾದಿ.

ಅ- **ಅವನು** ಮುಂತಾದ ಪ್ರತ್ಯಯಾಂತಗಳ ಮೇಲೆ ಭಾವಪ್ರತ್ಯಯವು ಬಂದಾಗ ಅವನು, ಅವಳು, ಅದು ಮೊದಲಾದವು ಲೋಪ ಹೊಂದುತ್ತವೆ.

ಉದಾ : ದೊಡ್ಡವನ ಭಾವ = ದೊಡ್ಡತನ

ಸಣ್ಣವನ ಭಾವ = ಸಣ್ಣತನ

ಬಡವನ ಭಾವ = ಬಡತನ*

ಹೀಗೆಯೇ ಹಿರಿಯತನ, ಕಿರಿಯತನ, ಚಿಕ್ಕತನ ಮೊದಲಾದವು.

ಇಕೆ - ಗೌಡಿಕೆ, ಉನ್ನತಿಕೆ, ತಳವಾರಿಕೆ

ಉ - ಕಿವುಡು, ಕುರುಡು, ತೊದಲು, ಕುಳ್ಳು

ಹೀಗೆಯೇ ಕೆಂಪು, ಕಡುಪು, ನಲ್ಮೆ, ಪೆಂಪು, ಕಂಪು - ಮೊದಲಾದವು ಹಳಗನ್ನಡದ ಶಬ್ದಗಳು ಹೊಸಗನ್ನಡದಲ್ಲಿ ಕೆಲವು ವಿಕಾರಗಳನ್ನು ಪಡೆಯುತ್ತವೆ.

ಉದಾ : ಕರ್ಪು = ಕಪ್ಪು, ತೆಳ್ಪು = ತೆಳುವು, ತಣ್ಪು = ತಂಪು,

ನುಣ್ಪು = ನುಣುಪು, ಪೆರ್ಮೆ = ಹೆಮ್ಮೆ

೩. ಮುಂದೆ ಹೇಳುವ **ಆನೆಯ ಅ, ಇನ, ಅಣ** - ಈ ಪ್ರತ್ಯಯಗಳ ಮುಂದೆ **ಅವನು, ಅವಳು** ಮುಂತಾದ ಪ್ರತ್ಯಯಗಳು ಯಥೋಚಿತವಾಗಿ ಸೇರಿ ನಾಮಪ್ರಕೃತಿಗಳಾಗುತ್ತವೆ. ಅವು ಸೇರದಿದ್ದಾಗ ಬರಿಯ ವಿಶೇಷಣಗಳಾಗಿರುತ್ತವೆ.

(ಅ) ಷಷ್ಠ್ಯಂತವಾದ ಸಂಖ್ಯಾವಾಚಕದ ಮೇಲೆ ಸ್ಥಾನ ನಿರ್ದೇಶದಲ್ಲಿ **ಆನೆಯ** ಪ್ರತ್ಯಯ ಬರುತ್ತದೆ.

ಉದಾ : ಒಂದರ ಸ್ಥಾನದವನು = ಒಂದನೆಯ

ಹತ್ತರ ಸ್ಥಾನದವನು = ಹತ್ತನೆಯ

ನೂರರ ಸ್ಥಾನದವನು = ನೂರನೆಯ

ಒಂದನೆಯವನು, ಒಂದನೆಯವಳು, ಒಂದನೆಯದು.

---

* ಸಿರಿವಂತನ ಭಾವ = ಸಿರಿತನ ಮುಂತಾದ ಶಬ್ದಗಳು ಬಳಕೆಗೆ ಬಂದಿವೆ.

(ಆ) ಅಧಿಕರಣಾರ್ಥದ ಅವ್ಯಯದ ಮೇಲೆ { ಇರುವವನು ಎಂಬ ಅರ್ಥದಲ್ಲಿ ಅ ಪ್ರತ್ಯಯ ಬರುತ್ತದೆ

ಉದಾ : ಅಲ್ಲಿ ಇರುವವನು = ಅಲ್ಲಿಯ

ಎಲ್ಲಿ ಇರುವವನು = ಎಲ್ಲಿಯ

ಹೀಗೆಯೇ ಇಲ್ಲಿಯ, ಅತ್ತಲ, ಇತ್ತಲ, ಎತ್ತಲ, ಕಡೆಯ.

ಅಲ್ಲಿಯವನು, ಇಲ್ಲಿಯವಳು, ಅತ್ತಲದು, ಅತ್ತಲಿನ, ಇತ್ತಲಿನ, ಎತ್ತಲಿನ - ಎಂಬ ರೂಪಗಳೂ ಉಂಟು.

(ಇ) ಅಧಿಕರಣಾರ್ಥದ ಅಕಾರಾಂತ ಮತ್ತು ಎಕಾರಾಂತ ಅವ್ಯಯಗಳ ಮೇಲೆ (ಕಡೆ ಎಂಬ ಶಬ್ದವನ್ನು ಬಿಟ್ಟು) ಇರುವವನು ಎಂಬ ಅರ್ಥದಲ್ಲಿ **ಇನ, ಅಣ** ಪ್ರತ್ಯಯಗಳು ಬರುತ್ತವೆ.

ಉದಾ : ಆಗ ಇರುವವನು = ಆಗಿನ, ಆಗಣ

ಮೇಲೆ ಇರುವವನು = ಮೇಲಿನ, ಮೇಲಣ

ಹೀಗೆಯೇ ಈಗಿನ, ಈಗಣ, ಕೆಳಗಿನ, ಕೆಳಗಣ, ಹೊರಗಿನ, ಹೊರಗಣ, ಹಿಂದಿನ, ಹಿಂದಣ, ಮುಂದಿನ, ಮುಂದಣ- ಮುಂತಾದವು.

ಆಗಿನವನು, ಮೇಲಿನವನು, ಈಗಣವಳು, ಮುಂದಣದು, ಎತ್ತಣದು.

೩. ನಾಮಪದಗಳ ಮೇಲೆ ಮುಂದೆ ಹೇಳುವ **ಅಂತೆ, ತನಕ** ಮೊದಲಾದ ಪ್ರತ್ಯಯಗಳು ಬರುತ್ತವೆ. ಇವು ಬಂದಾಗ ಹಿಂದಿನ ನಾಮಪದದ ವಿಭಕ್ತಿಗೆ ಲೋಪವಾಗುವುದಿಲ್ಲ. ಈ ತದ್ಧಿತಾಂತಗಳು ಅವ್ಯಯಗಳು.

(ಅ) ಷಷ್ಠ್ಯಂತದ ಮೇಲೆ ಸಾದೃಶ್ಯಾರ್ಥದಲ್ಲಿ **ಅಂತೆ, ಓಪಾದಿಯಲ್ಲಿ** ಎಂಬ ಪ್ರತ್ಯಯಗಳು ಬರುತ್ತವೆ.

ಉದಾ : ಚಂದ್ರನಂತೆ, ರಾಮನಂತೆ, ನಿನ್ನಂತೆ; ಚಂದ್ರನೋಪಾದಿಯಲ್ಲಿ, ಕಮಲದೋಪಾದಿಯಲ್ಲಿ, ಸೂರ್ಯನೋಪಾದಿಯಲ್ಲಿ.

(ಆ) ಅವಧಿಯನ್ನು ಹೇಳುವಾಗ ಷಷ್ಠ್ಯಂತದ ಮೇಲೆ **ವರೆಗೆ, ತನಕ** ಎಂಬ ಪ್ರತ್ಯಯಗಳು ಬರುತ್ತವೆ.

ಉದಾ : ಊರಿನವರೆಗೆ, ಸಂಜೆಯವರೆಗೆ; ಊರಿನತನಕ, ಸಂಜೆಯತನಕ ಈ ರೂಪವಿಶೇಷಗಳನ್ನು ಗಮನಿಸಬೇಕು -

ಹೇಳುವ ಕ್ರಿಯೆಯವರೆಗೆ = ಹೇಳುವವರೆಗೆ

ನೋಡುವ ಕ್ರಿಯೆಯ ತನಕ = ನೋಡುವತನಕ

ಇಂಥ ಸ್ಥಳಗಳಲ್ಲಿ 'ಕ್ರಿಯೆಯ' ಎಂಬ ಶಬ್ದಕ್ಕೆ ಲೋಪ ಬರುತ್ತದೆ.

(ಇ) ರೀತಿಗೆ, ಸ್ಥಿತಿಗೆ - ಎಂಬರ್ಥದಲ್ಲಿ **ಮಟ್ಟಿಗೆ** ಪ್ರತ್ಯಯ ಬರುತ್ತದೆ.
ಅವನಮಟ್ಟಿಗೆ, ನಿನ್ನಮಟ್ಟಿಗೆ

(ಈ) ನಿರ್ಧಾರಣೆ, ವಿಭಜನೆಗಳು ತೋರುವಾಗ ಚತುರ್ಥ್ಯಂತದ ಮೇಲೆ **ಇಂತ** ಪ್ರತ್ಯಯ ಬರುತ್ತದೆ.

ಉದಾ : ಅವನಿಗಿಂತ ಇವನು ದೊಡ್ಡವನು; ಅದಕ್ಕಿಂತ ಇದು ಉತ್ತಮ; ಬೆಳ್ಳಿಗಿಂತ ಚಿನ್ನಕ್ಕೆ ಹೆಚ್ಚು ಬೆಲೆ.

(ಉ) ಪ್ರಯೋಜನಾರ್ಥದಲ್ಲಿ ಚತುರ್ಥೀವಿಭಕ್ತ್ಯಂತದ ಮೇಲೆ **ಓಸ್ಕರ, ಓಸುಗ, ಆಗಿ** ಎಂಬ ಪ್ರತ್ಯಯಗಳು ಬರುತ್ತವೆ.

ಉದಾ : ಮಗುವಿಗೋಸ್ಕರ, ಹಣಕ್ಕೋಸುಗ, ನಿನಗಾಗಿ, ಅದಕ್ಕಾಗಿ.

(ಊ) ಪ್ರಯೋಜನಾರ್ಥದಲ್ಲಿ ಷಷ್ಠ್ಯಂತದ ಮೇಲೆ **ಸಲುವಾಗಿ** ಎಂಬ ಪ್ರತ್ಯಯ ಬರುತ್ತದೆ.

ಉದಾ: ನಿನ್ನ ಸಲುವಾಗಿ, ಪುಸ್ತಕದ ಸಲುವಾಗಿ, ಕೆಲವರು ನಿನಗೆ ಸಲುವಾಗಿ, ಅದಕ್ಕೆ ಸಲುವಾಗಿ - ಎಂದೂ ಪ್ರಯೋಗಿಸುತ್ತಾರೆ.



## ತದ್ಭವ ಪ್ರಕರಣ

ಹೊಸಗನ್ನಡದಲ್ಲಿ ಬಹಳ ಶಬ್ದಗಳು ಅಚ್ಚಗನ್ನಡವಾಗಿರುತ್ತವೆ. ಸಂಸ್ಕೃತದಿಂದ ಅನೇಕ ಶಬ್ದಗಳು ಪೂರ್ವಕಾಲದಿಂದಲೂ ಬಂದು ಸೇರಿಕೊಂಡಿವೆ. ಈಚೆಗೆ ವಿದೇಶೀಯರ ಸಂಪರ್ಕದಿಂದ ಹಿಂದೂಸ್ಥಾನಿ, ಪೋರ್ಚುಗೀಸ್, ಇಂಗ್ಲಿಷ್ ಮುಂತಾದ ಭಾಷೆಗಳೂ ಬಂದು ಸೇರಿವೆ.

ಉದಾ :

**ಅಚ್ಚಗನ್ನಡ** : ತಂದೆ, ತಾಯಿ, ನೆಲ, ಹೊಲ, ಮನೆ, ಗದ್ದೆ, ಮರ, ಗಿಡ, ಹೊಳೆ, ಹೋಗು, ಬರು, ತಿನ್ನು, ಒಂದು, ಎರಡು, ನೂರು, ಹೆಚ್ಚು, ಕಡಿಮೆ, ಚೆನ್ನಾಗಿ, ಅರಸ, ಕಣ್ಣು, ಕಿವಿ, ಆಕಳು, ಕರು, ಹುಲ್ಲು, ಎಣ್ಣೆ, ಬೆಣ್ಣೆ ಇತ್ಯಾದಿ.

**ಸಂಸ್ಕೃತದಿಂದ ಬಂದವು :** ಶಬ್ದ, ಲೇಖನಿ, ಭೂಮಿ, ಕೃಷಿ, ದಿನ, ರಾತ್ರಿ, ಸಹೋದರ, ಆದಿತ್ಯವಾರ, ಸೋಮವಾರ, ವಿದ್ಯಾರ್ಥಿ, ಉಪಾಧ್ಯಾಯ, ನಗರ, ಗ್ರಾಮ, ಆಕಾಶ,ನಕ್ಷತ್ರ, ಸೂರ್ಯ, ಚಂದ್ರ, ಮಿತ್ರ, ಶತ್ರು, ಯುದ್ಧ, ಕ್ಷೇಮ ಇತ್ಯಾದಿ.

**ಹಿಂದೂಸ್ಥಾನಿಯಿಂದ ಬಂದವು :** ಅರ್ಜಿ, ಕಚೇರಿ, ಬದಲು, ಬದಲಾವಣೆ, ಜಮೀನು, ರೈತ, ಕಾನೂನು, ಸರ್ಕಾರ, ಬಂದೂಕು, ಸವಾರ, ಕಾಗದ, ಹುಕುಂ, ಅಸಲಿ, ನಕಲಿ, ಮಂಜೂರು, ಚುನಾವಣೆ, ದರ್ಬಾರು ಇತ್ಯಾದಿ.

**ಪೋರ್ಚುಗೀಸ್ ಭಾಷೆಯಿಂದ ಬಂದವು :** ಅಲಮಾರು, ಸಾಬೂನು, ಮೇಜು, ಪಾದ್ರಿ ಮೊದಲಾದವು.

**ಇಂಗ್ಲಿಷ್‌ನಿಂದ ಬಂದವು :** ರೈಲು, ಕೋರ್ಟು, ಬ್ಯಾಂಕು, ಬೆಂಚು, ಟಿಕೆಟ್ಟು, ಸೋಪು, ಬಿಲ್ಲು, ಸ್ಕೂಲು, ಪೆನ್ಸಿಲ್ಲು, ಬ್ರೆಡ್ಡು, ಸೊಸೈಟಿ, ಮಿಲ್ಲು, ರಿಜಿಸ್ಟರು, ಇತ್ಯಾದಿ.

**ಅರಬ್ಬೀ ಭಾಷೆಯಿಂದ ಬಂದವು :** ಅನಾಮತ್ತು, ಆಸಾಮಿ, ಇಲಾಖೆ, ಖಜಾನೆ, ಗಾಡೀಖಾನೆ, ಜಪ್ತಿ, ನಾಜೂಕು, ಮಾಮೂಲು, ವಸೂಲು, ಸಾವಕಾರ ಇತ್ಯಾದಿ.

ಅಚ್ಚಗನ್ನಡದ ಶಬ್ದಗಳನ್ನು **ದೇಶ್ಯ**ಗಳೆಂದೂ ಸಂಸ್ಕೃತವಲ್ಲದ ಇತರ ಭಾಷೆಯ ಶಬ್ದಗಳನ್ನು **ಅನ್ಯದೇಶ್ಯ**ಗಳೆಂದೂ ಕರೆಯಬಹುದು. ಸಂಸ್ಕೃತದಿಂದ ಬಂದ ಶಬ್ದಗಳಲ್ಲಿ **ತತ್ಸಮ, ತದ್ಭವ** ಎಂದು ಎರಡು ವಿಧ.

ಹೊಸಗನ್ನಡದಲ್ಲಿ ವ್ಯಂಜನಾಂತವಾದ ಶಬ್ದವಿಲ್ಲ. ವ್ಯಂಜನಾಂತವಾದ ಎಲ್ಲ ಮೂಲಶಬ್ದಗಳಿಗೂ ವಿಶೇಷವಾಗಿ ಉಕಾರವೂ ಕೆಲವೆಡೆ ಇಕಾರ ಅಥವಾ ಅಕಾರವು ಸೇರಿ, ಎಲ್ಲವೂ ಸ್ವರಾಂತಗಳಾಗಿ ನಿಲ್ಲುತ್ತವೆ.

೧. ಹಳಗನ್ನಡದ ವ್ಯಂಜನಾಂತಗಳಿಗೆ ಉಕಾರ ಸೇರುವುದು.

ಉದಾ : ಕೋಲ್- ಕೋಲು    ತೇರ್- ತೇರು
ಆಳ್ - ಆಳು    ಏನ್ - ಏನು
ನೇಣ್ - ನೇಣು    ನೀನ್ - ನೀನು
ನಾರ್ - ನಾರು    ತೊದಲ್ - ತೊದಲು
ತೊಟ್ಟಿಲ್ - ತೊಟ್ಟಿಲು    ಕಾಲ್ - ಕಾಲು
ಬೇರ್ - ಬೇರು

೨. ಶಬ್ದದಲ್ಲಿ ಒಂದೇ ಸ್ವರವಿದ್ದು ಹ್ರಸ್ವವಾಗಿದ್ದರೆ ವ್ಯಂಜನಕ್ಕೆ ದ್ವಿತ್ವವಾಗಿ ಉಕಾರವು ಸೇರುತ್ತದೆ.

ಉದಾ : ಕಣ್ - ಕಣ್ಣು    ಮಣ್ - ಮಣ್ಣು
ಮುಳ್ - ಮುಳ್ಳು    ಕಲ್ - ಕಲ್ಲು
ಹೆಣ್ - ಹೆಣ್ಣು    ಸೊಲ್ - ಸೊಲ್ಲು
ಪೊನ್ - ಹೊನ್ನು    ಬಿಲ್ - ಬಿಲ್ಲು

೩. ಕಡೆಯ ವ್ಯಂಜನ ಯಕಾರವಾಗಿದ್ದರೆ ಇಕಾರ ಸೇರುತ್ತದೆ.

ಉದಾ : ತಾಯ್ - ತಾಯಿ    ಬಾಯ್ - ಬಾಯಿ
ಕಾಯ್ - ಕಾಯಿ    ನಾಯ್ - ನಾಯಿ

೪. ಆದಿಯಲ್ಲಿರುವ ಪಕಾರಕ್ಕೆ ಸಾಮಾನ್ಯವಾಗಿ ಹಕಾರ ಬರುತ್ತದೆ.

ಉದಾ : ಪಾಲ್ - ಹಾಲು    ಪಿರಿಯ - ಹಿರಿಯ
ಪಕ್ಕಿ - ಹಕ್ಕಿ    ಪೊಸ - ಹೊಸ
ಪಗೆ - ಹಗೆ    ಪಾಡು - ಹಾಡು
ಪುಲಿ - ಹುಲಿ    ಪಸಿವು - ಹಸಿವು
ಪೊಳೆ - ಹೊಳೆ    ಪಾವು - ಹಾವು
ಪಂದಿ - ಹಂದಿ    ಪೂ - ಹೂ

೫. ಸಂಯುಕ್ತಾಕ್ಷರಗಳ ಮೊದಲಿನ ರೇಫ, ಳಕಾರಗಳಿಗೆ ಮುಂದಿನ ವ್ಯಂಜನವು ಆದೇಶವಾಗಿ ಬರುತ್ತದೆ.

ಉದಾ : ಪರ್ಬು - ಹಬ್ಬು    ಎಳ್ಚರು - ಎಚ್ಚರು
ಕರ್ಬು - ಕಬ್ಬು    ಎಳ್ತರ - ಎತ್ತರ
ಕಳ್ತಲೆ - ಕತ್ತಲೆ    ತಿರ್ದು - ತಿದ್ದು
ಕಳ್ತೆ- ಕತ್ತೆ    ಪರ್ದು - ಪದ್ದು
ಚುರ್ಚು - ಚುಚ್ಚು

೬. ಹಳಗನ್ನಡದ ಶಬ್ದಗಳು ಇನ್ನೂ ಅನೇಕ ಬಗೆಯಲ್ಲಿ ರೂಪಾಂತರಗಳನ್ನು ಪಡೆದು ಹೊಸಗನ್ನಡದಲ್ಲಿ ಬಂದಿವೆ.

ಉದಾ : ಒಲ್ಮೆ - ಒಲುಮೆ    ಕವುಂಕುಳ್ - ಕಂಕುಳು
ಕಾಣ್ಕೆ - ಕಾಣಿಕೆ    ಪೊಸಂತಿಲ್ - ಹೊಸಲು, ಹೊಸ್ತಿಲು

ಬಣಂಬೆ - ಬಣವೆ

ಬಳಲೆ - ಬಳಲಿಕೆ

ಪೊರಮಡು - ಹೊರಡು

ಬೇಳ್ಕುಂ - ಬೇಕು

ಇರುಂಪೆ - ಇರುವೆ

ಅಂತಹ - ಅಂಥ

ಇಂತಹ - ಇಂಥ

ಎಂತಹ - ಎಂಥ

ಅಹಗೆ - ಹಾಗೆ

ಇಹಗೆ - ಹೀಗೆ

ಎಹಗೆ - ಹೇಗೆ

ಒಲ್ಮೆ - ಒಲುಮೆ

ಪೆರ್ಮೆ - ಹೆಮ್ಮೆ

ಒರ್ಮೆ - ಒಮ್ಮೆ

ಕೆರ್ಪು - ಕೆರ

ಅಪ್ಪುದು - ಅಹುದು, ಹೌದು

ತೋಂಟ - ತೋಟ

ನೊರಂಜು - ನೊರಜು

ಬಣಂಜಿಗ - ಬಣಜಿಗ

ಕೊಡಂತಿ - ಕೊಡತಿ

ಸೆರಂಗು - ಸೆರಗು

ತುಳುಂಕು - ತುಳುಕು

ಹೀಗೆಯೇ ಧಾತುಗಳೂ ರೂಪಾಂತರಗಳನ್ನು ಪಡೆದಿವೆ.

ಉದಾ : ತಿನ್ - ತಿನ್ನು

ಕೊಲ್ - ಕೊಲ್ಲು

ಬರ್ದುಕು - ಬದುಕು

ಕಿಮುಳ್ಚು - ಕಿವುಚು

ನಾಣ್ಚು - ನಾಚು

ಅವುಂಕು - ಔಕು

ಪೊಣ್ಮು - ಹೊಮ್ಮು

## ಸಂಸ್ಕೃತ ಶಬ್ದಗಳು

ಕನ್ನಡದಲ್ಲಿ ಸಂಸ್ಕೃತ ಶಬ್ದಗಳು ವಿಪುಲವಾಗಿ ಸೇರಿಕೊಂಡಿವೆ. ಈಗಿನ ವಿಜ್ಞಾನ ಶಾಸ್ತ್ರಾದಿಗಳಿಂದಾದ ಅವಶ್ಯಕತೆಗಾಗಿ ಹೊಸದಾಗಿ ಶಬ್ದಗಳು ಸೇರುತ್ತಲೂ ಇವೆ. ಸಂಸ್ಕೃತ ಶಬ್ದಗಳು ಕನ್ನಡದಲ್ಲಿ ಮೂರು ಬಗೆಯಿಂದ ಬಳಕೆಗೆ ಬಂದಿವೆ.

೧. ಯಾವ ರೂಪಾಂತರವನ್ನೂ ಪಡೆಯದೆ ಬಳಕೆಗೆ ಬಂದವು.

ಉದಾ : ದೇಹ, ಗೃಹ, ಬುದ್ಧಿ, ಶುದ್ಧಿ, ಶಿಶು, ಗುರು.

೨. ಶಬ್ದದ ಅಂತ್ಯಭಾಗದಲ್ಲಿ ಮಾತ್ರ (ಕನ್ನಡದ ವಿಭಕ್ತಿಯನ್ನು ಸೇರಿಸುವ ಸೌಕರ್ಯಕ್ಕಾಗಿ) ಬದಲಾವಣೆಯನ್ನು ಪಡೆದವು.

ಉದಾ: ಶಾಲಾ- ಶಾಲೆ, ಮಾಲಾ- ಮಾಲೆ, ನದೀ- ನದಿ, ಗೌರೀ- ಗೌರಿ, ವಿದ್ವಾನ್- ವಿದ್ವಾಂಸ, ಪರಿಷತ್- ಪರಿಷತ್ತು.

೩. ಶಬ್ದದ ಆದಿ ಮಧ್ಯಭಾಗಗಳಲ್ಲಿಯೂ ಸಹ ನಾನಾ ದೇಶಗಳು ಬಂದು ಪೂರ್ಣವಾಗಿ ರೂಪಾಂತರಗೊಂಡವು.

ಉದಾ : ಕಾಂಸ್ಯ - ಕಂಚು, ಸೌಭಾಗ್ಯ- ಸೊಬಗು, ದಂಷ್ಟ್ರಾ - ದಾಡೆ, ವಿಜ್ಞಾಪನಾ- ಬಿನ್ನಹ, ಇಟ್ಟಕಾ- ಇಟ್ಟಿಗೆ, ಸಂತೋಷ - ಸಂತಸ.

ಇವುಗಳಲ್ಲಿ ಮೊದಲನೆಯ ಮತ್ತು ಎರಡನೆಯ ಬಗೆಯ ಶಬ್ದಗಳಿಗೆ ಸಮ ಸಂಸ್ಕೃತವೆಂದೂ ಮೂರನೆಯ ಬಗೆಯ ಶಬ್ದಗಳಿಗೆ ತದ್ಭವವೆಂದೂ ಹೆಸರು. ಸಮಸಂಸ್ಕೃತ = ಸಂಸ್ಕೃತಶಬ್ದಕ್ಕೆ ಸಮನಾದುದು. ತದ್ಭವ = ಸಂಸ್ಕೃತದಿಂದ ಹುಟ್ಟಿದ್ದು.*

ಆದರೆ ಈಗ ಸ್ವಲ್ಪವೂ ರೂಪಾಂತರಗೊಳ್ಳದ ಮೊದಲನೆಯ ಬಗೆಯ ಶಬ್ದಗಳಿಗೆ ತತ್ಸಮವೆಂದೂ ಉಳಿದ ಎರಡು ಬಗೆಯ ಶಬ್ದಗಳಿಗೆ ತದ್ಭವವೆಂದೂ ಹೆಸರು ರೂಢಿಗೆ ಬಂದಿದೆ.

ಸಂಸ್ಕೃತ ಶಬ್ದಗಳು ಅಂತ್ಯಭಾಗದಲ್ಲಿ ರೂಪಾಂತರಗೊಳ್ಳುವುದು ಹೇಗೆಂದರೆ-

೧. ಕೊನೆಯ ದೀರ್ಘಸ್ವರವು ಹ್ರಸ್ವವಾಗುವುದು.

ಉದಾ : ನಾರೀ - ನಾರಿ ವಧೂ - ವಧು
ನದೀ - ನದಿ ಚಮೂ - ಚಮು
ಗೌರೀ - ಗೌರಿ ಸ್ವಯಂಭೂ - ಸ್ವಯಂಭು

೨. ಕೊನೆಯ ಆಕಾರಕ್ಕೆ ಎಕಾರಾದೇಶ ಬರುವುದು.

ಉದಾ : ಮಾಲಾ- ಮಾಲೆ ಶಾಲಾ - ಶಾಲೆ
ಲತಾ - ಲತೆ ಬಾಲಾ - ಬಾಲೆ
ನಿಂದಾ - ನಿಂದೆ ಮುದ್ರಾ- ಮುದ್ರೆ

ಗ್ರೀವಾ- ಗ್ರೀವೆ, ಗ್ರೀವ, ದಯಾ- ದಯೆ-ದಯ, ಕರುಣಾ- ಕರುಣೆ, ಕರುಣ- ಇವಕ್ಕೆ ಎರಡೂ ರೂಪಗಳುಂಟು.

೩. ಕೆಲವು ಶಬ್ದಗಳ ಕೊನೆಯ ಅಕಾರಕ್ಕೆ ಎಕಾರವಾಗಲಿ ಉಕಾರವಾಗಲಿ

ಉದಾ : ಪ್ರಶ್ನ - ಪ್ರಶ್ನೆ ದಮ - ದಮೆ
ವಧ - ವಧೆ ರೂಪ - ರೂಪು
ಅಕ್ಷತ - ಅಕ್ಷತೆ ನೀರ - ನೀರು

---

*ಕೇಶಿರಾಜನು- ಮಣಿ, ಮಂಚ, ಪಟ್ಟ, ತೋರಣ ಮುಂತಾದ ೨೧ ಶಬ್ದಗಳನ್ನು ಪಟ್ಟಿ ಮಾಡಿ ಅವುಗಳನ್ನು ತತ್ಸಮವೆಂದು ಕರೆದಿದ್ದಾನೆ. (ಸೂತ್ರ. ೩೦೧-೩೦೨). ಇದನ್ನು ಸಂಸ್ಕೃತ ಶಬ್ದದೊಡನೆಯೂ ಕನ್ನಡ ಶಬ್ದದೊಡನೆಯೂ ಸಮಾಸ ಮಾಡಬಹುದು. ಅರಿ ಸಮಾಸ ದೋಷವಿಲ್ಲ. ತತ್ಸಮ- ಸಂಸ್ಕೃತಕ್ಕೂ ಕನ್ನಡಕ್ಕೂ ಸಮವಾದದ್ದು. ಕೇಶಿರಾಜನ ಮತದಂತೆ ತತ್ಸಮವು ಸಮಸಂಸ್ಕೃತದ ಒಳಭೇದವಾಗುತ್ತದೆ. ಸಮಸಂಸ್ಕೃತವನ್ನು ಅಚ್ಚಗನ್ನಡ ಶಬ್ದದೊಡನೆ ಸಮಾಸ ಮಾಡಬಾರದು -ತತ್ಸಮವನ್ನು ಮಾಡಬಹುದು ಎಂಬುದೇ ವಿಶೇಷ.

ಊಹ - ಊಹೆ ಮೀನ - ಮೀನು
ಅಭಿಲಾಷ - ಅಭಿಲಾಷೆ ಕೀಲ - ಕೀಲು
ಶಮ - ಶಮೆ.

೪. ಕೊನೆಯ ಋಕಾರಕ್ಕೆ, ಅ, ಅರ ಎಂಬ ಆದೇಶಗಳು ಬರುವುವು.

ಉದಾ : ಕರ್ತೃ-ಕರ್ತ, ಕರ್ತಾರ

ದಾತೃ-ದಾತ, ದಾತಾರ

ಪಿತೃ, ಮಾತೃ ಶಬ್ದಗಳು ಪಿತ ಮಾತೆ ಎಂದಾಗುತ್ತವೆ.

೫. ಕೊನೆಯ ನಕಾರಕ್ಕೆ ಲೋಪ ಬರುವುದು.

ಉದಾ : ರಾಜನ್ - ರಾಜ ಆತ್ಮನ್ - ಆತ್ಮ

ಕರಿನ್ - ಕರಿ ಗುಣಿನ್ - ಗುಣಿ

೬. ವ್ಯಂಜನಾಂತವಾದ ಕೆಲವು ಶಬ್ದಗಳ ಕೊನೆಯ ವ್ಯಂಜನಕ್ಕೆ ಲೋಪವಾಗಲಿ ಉಕಾರದೊಡನೆ ದ್ವಿತ್ವವಾಗಲಿ ಬರುವುದು.

ಉದಾ : ಧನುಸ್ - ಧನು, ಧನುಸ್ಸು ಮನಸ್- ಮನ, ಮನಸ್ಸು

ಶಿರಸ್- ಶಿರ, ಶಿರಸ್ಸು ತೇಜಸ್- ತೇಜ, ತೇಜಸ್ಸು

ಯಶಸ್- ಯಶ, ಯಶಸ್ಸು ಜಗತ್- ಜಗ, ಜಗತ್ತು

೭. ಕೆಲವು ಶಬ್ದಗಳ ಕಡೆಯ ವ್ಯಂಜನಕ್ಕೆ ಉಕಾರದೊಡನೆ ದ್ವಿತ್ವ ಬರುತ್ತದೆ.

ಉದಾ: ಪ್ರತಿಷತ್-ಪ್ರತಿಷತ್ತು ದಿಕ್ - ದಿಕ್ಕು

ಪರಿಷತ್- ಪರಿಷತ್ತು ವಾಕ್ - ವಾಕ್ಕು

ಸಂಪತ್- ಸಂಪತ್ತು ತ್ವಕ್- ತ್ವಕ್ಕು

ವಿಪತ್- ವಿಪತ್ತು ಮರುತ್- ಮರುತ್ತು

ಇಂದ್ರಜಿತ್ ಶಬ್ದಕ್ಕೆ ಇಂದ್ರಜಿತ್ತು, ಇಂದ್ರಜಿತು, ಇಂದ್ರಜಿತ ಎಂಬ ಮೂರು ರೂಪಗಳುಂಟು.

೮. ಕೆಲವು ಶಬ್ದಗಳ ಕಡೆಯ ವ್ಯಂಜನದ ಮುಂದೆ ಅಕಾರ ಸೇರುತ್ತದೆ.

ಉದಾ : ವೇದವಿದ್- ವೇದವಿದ
ಶಾಸ್ತ್ರವಿದ್- ಶಾಸ್ತ್ರವಿದ

೯. ಕೆಲವು ವ್ಯಂಜನಾಂತ ಶಬ್ದಗಳು, ಸಂಸ್ಕೃತದ ಪುಲ್ಲಿಂಗ ಪ್ರಥಮಾ ಬಹುವಚನದ ರೂಪವನ್ನು ತಳೆದು ವಿಸರ್ಗಲೋಪವನ್ನು ಪಡೆಯುತ್ತವೆ.

ಉದಾ: ವಿದ್ವಾಂಸ, ಭಗವಂತ, ಹನುಮಂತ, ಶ್ರೀಮಂತ, ಗುಣವಂತ.

ಈ ಬಗೆಯಲ್ಲಿ ಬಹುವಚನದ ರೂಪವನ್ನು ಪಡೆಯುವ ಶಬ್ದಗಳು ಸ್ತ್ರೀಲಿಂಗ, ನಪುಂಸಕಲಿಂಗಗಳಲ್ಲಿ ಸಂಸ್ಕೃತದ ಸ್ತ್ರೀಲಿಂಗ, ನಪುಂಸಕಲಿಂಗಗಳ ಏಕವಚನದ ರೂಪವನ್ನನುಸರಿಸುತ್ತವೆ.

ಉದಾ : ಸ್ತ್ರೀಲಿಂಗಕ್ಕೆ- ವಿದುಷಿ, ಭಗವತಿ, ಶ್ರೀಮತಿ, ರೂಪವತಿ, ಗುಣವತಿ.

ನಪುಂಸಕಕ್ಕೆ- ಗುಣವತ್ತು, ರೂಪವತ್ತು.

ಸ್ತ್ರೀಲಿಂಗದಲ್ಲಿ ಗುಣವಂತೆ, ರೂಪವಂತೆ ಮೊದಲಾದ ರೂಪಗಳೂ ಉಂಟು.

ಇನ್ನು ಕೆಲವು ಸಂಸ್ಕೃತ ಶಬ್ದಗಳು, ಆದಿ ಮಧ್ಯ ಭಾಗದಲ್ಲಿಯೂ ರೂಪಾಂತರಗಳನ್ನು ಪಡೆಯುತ್ತವೆ. ಶ,ಷ ಗಳಿಗೆ ದಕಾರವೂ ಯಕಾರಕ್ಕೆ ಜಕಾರವೂ ಮಹಾಪ್ರಾಣಗಳಿಗೆ ಅಲ್ಪಪ್ರಾಣಗಳೂ ವರ್ಗ ಪ್ರಥಮಾಕ್ಷರಗಳಿಗೆ ತೃತೀಯಾಕ್ಷರಗಳೂ ಆದೇಶವಾಗುತ್ತವೆ. ಒತ್ತಕ್ಷರಗಳಲ್ಲೊಂದಕ್ಕೆ ಲೋಪಬರುವುದುಂಟು. ಇನ್ನೂ ಅನೇಕ ವಿಕಾರಗಳು ಸಂಭವಿಸುತ್ತವೆ. ಹಳಗನ್ನಡದಲ್ಲಿ ವಿಶೇಷವಾಗಿ ಇವುಗಳ ಬಳಕೆಯುಂಟು. ಪ್ರಸಿದ್ಧವಾದ ಕೆಲವು ಶಬ್ದಗಳನ್ನು ಇಲ್ಲಿ ಉದಾಹರಿಸಿದೆ.

| | |
|---|---|
| ಆಶಾ- ಆಸೆ | ಮುಕ್ತಿ - ಮುಕುತಿ |
| ಸ್ನುಷಾ- ಸೊಸೆ | ಯುಕ್ತಿ - ಯುಕುತಿ |
| ಮಷೀ- ಮಸಿ | ಸ್ಥಾನ - ತಾಣ |
| ದಿಶಾ- ದೆಸೆ | ವರ್ತೀ- ಬತ್ತಿ |
| ಯೋಗಿನ್ - ಜೋಗಿ | ಕರ್ತರೀ- ಕತ್ತರಿ |
| ಯಾತ್ರಾ - ಜಾತ್ರೆ | ಛುರೀ - ಚೂರಿ |
| ಘಂಟಾ - ಘಂಟೆ | ನಿದ್ರಾ - ನಿದ್ದೆ |
| ಛಲ - ಚಲ | ವೇತ್ರ - ಬೆತ್ತ |
| ಅಚ್ಛ - ಅಚ್ಚ | ಕಾವ್ಯ - ಕಬ್ಬ |
| ಶುಂಠಿ- ಸುಂಟಿ | ತುಲಸೀ-ತೊಳಸಿ; ತುಳಸಿ |
| ಕಥಾ - ಕತೆ | ಶೃಂಗಾರ- ಸಿಂಗರ; ಸಿಂಗಾರ |

| | |
|---|---|
| ಭೂತ- ಬೂತ, ಬೂತು | ಕಾಂಸ್ಯ - ಕಂಚು |
| ಮಲ್ಲಿಕಾ - ಮಲ್ಲಿಗೆ | ಪುಸ್ತಕ - ಹೊತ್ತಗೆ |
| ಸೂಚೀ - ಸೂಜಿ | ಕನ್ಯಕಾ - ಕನ್ನಿಕೆ |
| ತಟ - ದಡ | ಶಷ್ಕುಲೀ -ಚಕ್ಕುಲಿ |
| ಅಟವೀ - ಅಡವಿ | ಪಾದುಕಾ - ಹಾವುಗೆ |
| ಚತುರ - ಚದುರ | ದಂತ - ಜಂತ |
| ದೀಪಿಕಾ - ದೀವಿಗೆ | ಸೌಭಾಗ್ಯ - ಸೊಬಗು |
| ವ್ಯಾಪೀ - ಬಾವಿ | ಧ್ವನಿ - ದನಿ |
| ಯಾಮ - ಜಾವ | ಗ್ರಂಥಿ - ಗಂಟು |
| ಕುಮಾರ - ಕುವರ | ವಿಜ್ಞಾಪನಾ- ಬಿನ್ನಹ |
| ವೇಗ - ಬೇಗ | ಆಶ್ಚರ್ಯ - ಅಚ್ಚರಿ; ಅಚ್ಚರಿಯ |
| ವೀಥೀ - ಬೀದಿ | ಯುಗ - ನೊಗ |
| ಪ್ರಾಣ - ಹರಣ | ಚತುರ್ಥೀ - ಚೌತಿ |
| ಶ್ರೀ - ಸಿರಿ | ಪ್ರಯಾಣ - ಪಯಣ |
| ಶೃಂಖಲಾ - ಸಂಕಲೆ , ಸಂಕೋಲೆ | ವರ್ಧಕಿ - ಬಡಗಿ |
| | ಪಶು - ಹಸು |



## ಸಮಾಸ ಪ್ರಕರಣ

ಎರಡು ಅಥವಾ ಅದಕ್ಕೂ ಹೆಚ್ಚಿನ ಪದಗಳು ಅರ್ಥಾನುಸಾರವಾಗಿ ಸೇರಿ ಒಂದು ಶಬ್ದವಾಗುವುದಕ್ಕೆ ಸಮಾಸವೆಂದು ಸಂಜ್ಞೆ. ಸಮಾಸದಲ್ಲಿರುವ ಮೊದಲನೆಯ ಪದಕ್ಕೆ ಪೂರ್ವಪದವೆಂದೂ ನಡುವಿನ ಪದಕ್ಕೆ ಮಧ್ಯಮಪದವೆಂದೂ ಕಡೆಯ ಪದಕ್ಕೆ ಉತ್ತರ ಪದವೆಂದೂ ಹೆಸರು, ಸಮಾಸದ ಅರ್ಥವನ್ನು ಬಿಡಿಸಿ ಹೇಳುವ ವಾಕ್ಯವನ್ನು ವಿಗ್ರಹವಾಕ್ಯವೆನ್ನುತ್ತಾರೆ.

| ಉದಾ : | **ವಿಗ್ರಹವಾಕ್ಯ** | **ಸಮಾಸ** |
|---|---|---|
| | ಮಳೆಯ ಕಾಲ | ಮಳೆಗಾಲ |
| | ಮಲ್ಲಿಗೆಯ ಹೂ | ಮಲ್ಲಿಗೆ ಹೂ |
| | ಹಿರಿದು ಜೇನು | ಹೆಜ್ಜೇನು |
| | ಕಾಲಿನ ಮುಂದು | ಮುಂಗಾಲು |

ಮೂರು ಕಣ್ಣುಗಳು ಯಾರಿಗೋ ಅವನು ಮುಕ್ಕಣ್ಣ

ಗಿಡ, ಮರ ಮತ್ತು ಬಳ್ಳಿ ಗಿಡಮರಬಳ್ಳಿಗಳು

ಸಮಾಸದಲ್ಲಿ ಸೇರಿದ ಪದಗಳ ವಿಭಕ್ತಿಗೆ ಲೋಪ ಬರುತ್ತದೆ. ಸಮಾಸವು ಪ್ರಾತಿಪದಿಕವಾದ್ದರಿಂದ ಅರ್ಥಾನುಸಾರವಾಗಿ, ಸಮುದಾಯದ ಮೇಲೆ ಮತ್ತೆ ವಿಭಕ್ತಿ ಬಂದು 'ಮಳೆಗಾಲವನ್ನು, ಮಳೆಗಾಲದಿಂದ' ಮುಂತಾದ ರೂಪಗಳಾಗುತ್ತವೆ. 'ಮಳೆಗಾಲ' ಎಂಬ ಸಮಾಸದಲ್ಲಿ 'ಮಳೆ' ಪೂರ್ವಪದ. 'ಕಾಲ' ಉತ್ತರಪದ. ಗಿಡಮರಬಳ್ಳಿಗಳು- ಎಂಬಲ್ಲಿ 'ಮರ ಮಧ್ಯಮಪದ ಸಮಾಸವು ವಿಕಲ್ಪವಾದ್ದರಿಂದ ಸಮಾಸದ ಅರ್ಥದಲ್ಲಿ, ಗಮಕಸಮಾಸದ ಹೊರತಾಗಿ, ವಿಗ್ರಹವಾಕ್ಯವನ್ನು ಬಳಸಬಹುದು. ಗಮಕ ಸಮಾಸದ ವಿಷಯವನ್ನು ಮುಂದೆ ಹೇಳಲಾಗುತ್ತದೆ.

**ಸಮಾಸದಲ್ಲಾಗುವ ವಿಶೇಷ**

೧. ಪೂರ್ವಪದದ ವಿಭಕ್ತಿಯು ಲೋಪಹೊಂದುತ್ತದೆ.

ಉದಾ : ಕಾಲಿನ ಬಳೆ = ಕಾಲುಬಳೆ; ಕಾಲ ಬಳೆ = ಕಾಲ್ಬಳೆ

೨. ಕೆಲವು ಕಡೆ ಪೂರ್ವಪದದಲ್ಲಿ ಲೋಪ ಮುಂತಾದ ವಿಕಾರಗಳಾಗುತ್ತವೆ.

ಉದಾ : ಚಿಕ್ಕದು ಮಗು = ಚಿಕ್ಕಮಗು

ಹಿರಿದು ಜೇನು = ಹೆಜ್ಜೇನು

ಅರಸಿನ ಮನೆ = ಅರಮನೆ

೩. ಕೆಲವು ಕಡೆ ಉತ್ತರ ಪದದಲ್ಲಿ ವಿಕಾರವಾಗುತ್ತದೆ.

ಉದಾ : ಮಳೆಯ ಕಾಲ = ಮಳೆಗಾಲ

ಬೆಟ್ಟದ ತಾವರೆ = ಬೆಟ್ಟದಾವರೆ.

೪. ಕೆಲವು ಕಡೆ ಪೂರ್ವೋತ್ತರ ಪದಗಳೆರಡರಲ್ಲಿಯೂ ವಿಕಾರಗಳಾಗುತ್ತವೆ.

ಉದಾ : ಹಳೆಯದು ಕನ್ನಡ = ಹಳಗನ್ನಡ

ನಿಡಿದು ಮೂಗು (ಯಾರಿಗೋ ಅವನು) = ನಿಡಿಮೂಗ

೫. ಕೆಲವು ಕಡೆ ಪೂರ್ವಪದವಾಗಬೇಕಾದ್ದು ಉತ್ತರಪದವೂ ಉತ್ತರಪದವಾಗಬೇಕಾದ್ದು ಪೂರ್ವಪದವೂ ಆಗುತ್ತದೆ.

ಉದಾ : ತಲೆಯ ಮುಂದು = ಮುಂದಲೆ

ಕಣ್ಣ ಕಡೆ = ಕಡೆಗಣ್ಣು

೬. ಕೆಲವು ಕಡೆ ಪೂರ್ವಪದದ ವಿಭಕ್ತಿಗೆ ಲೋಪಬರುವುದಿಲ್ಲ.

ಉದಾ : ತೆಂಗಿನ ಮರ, ಚಿಕ್ಕನಾಯಕನ ಹಳ್ಳಿ

ಪೂರ್ವಪದದ ವಿಭಕ್ತಿಗೆ ಲೋಪವಾಗದಿದ್ದರೆ **ಅಲುಕ್ ಸಮಾಸ**ವೆಂದು ಹೆಸರು. ಅಲುಕ್ ಸಮಾಸವನ್ನೊಪ್ಪುವ ಉದ್ದೇಶವೇನೆಂದರೆ -

೧.ಸಮಾಸದ ನಡುವೆ ಸಮಾಸಕ್ಕೆ ಸೇರದ ಇನ್ನೊಂದು ಶಬ್ದವನ್ನು ಪ್ರಯೋಗಿಸಬಾರದು. ತೆಂಗಿನ ನನ್ನ ಮರ - ಎಂದು ಹೇಳಬಾರದು. ನನ್ನ ತೆಂಗಿನಮರ ಎನ್ನಬಹುದು.

೨. ಅಲುಕ್ ಸಮಾಸದಲ್ಲಿ ಒಂದು ರೂಢಾರ್ಥವು ತೋರುತ್ತದೆ.

ಉದಾ : ಚಿಕ್ಕನಾಯಕನಹಳ್ಳಿ, ದೊಡ್ಡಮಗಳೂರು

೩. ಅಲುಕ್ ಸಮಾಸವೆಂದು ಒಪ್ಪಿದ್ದರಿಂದ 'ತೆಂಗುಮರ' ಮುಂತಾದ ರೂಪಗಳು ಇಲ್ಲವೆಂದು ಗೊತ್ತಾಗುತ್ತದೆ.

ಕನ್ನಡ ಪದಕ್ಕೆ ಕನ್ನಡಪದದೊಡನೆ ಆಗುವ ಸಮಾಸ ಕನ್ನಡ ಸಮಾಸ. ಸಂಸ್ಕೃತ ಪದಕ್ಕೆ ಸಂಸ್ಕೃತ ಪದದೊಡನೆ ಆಗುವ ಸಮಾಸ ಸಂಸ್ಕೃತ ಸಮಾಸ. ಇವೆರಡೂ ಕನ್ನಡದಲ್ಲಿ ಬಳಕೆಯಾಗಿವೆ. ಈ ವಿಷಯದಲ್ಲಿ ತದ್ಭವವನ್ನು ಕನ್ನಡ ಪದವೆಂದು ತಿಳಿಯಬಹುದು. ಕನ್ನಡಪದದೊಡನೆ ಸಂಸ್ಕೃತಪದವನ್ನು ಸೇರಿಸಿ ಸಮಾಸವನ್ನು ಮಾಡಬಾರದು. ಇಂಥ ಸಮಾಸಕ್ಕೆ **ಅರಿಸಮಾಸ**ವೆಂದು ಹೆಸರು. ಇದು ಒಂದು ದೋಷ.

ಉದಾ : ಮಲ್ಲಿಗೆ ಪುಷ್ಪ, ಮನೆಕಾರ್ಯ, ಶಿರೋನೋವು- ಇವು ಅರಿಸಮಾಸಗಳು. ಆದರೆ ಪೂರ್ವಕವಿಪ್ರಯೋಗ, ಬಿರುದಾವಳಿ, ಕ್ರಿಯಾಸಮಾಸ, ಗಮಕ ಸಮಾಸಗಳಲ್ಲಿ ಅರಿಸಮಾಸವು ದೋಷವಿಲ್ಲ.

ಉದಾ : ಪೂರ್ವಕವಿಪ್ರಯೋಗ- ಮಳೆಗಾಲ, ಮಂಗಳಾರತಿ, ದಳಪತಿ, ಕಡುರಾಗ, ಕೂರಸಿ, ಮಾಕಾಳಿ ಇತ್ಯಾದಿ.

ಬಿರುದಾಳಿ - ದಳಮುಖಧವಳ, ರಾಯಕೋಲಾಹಲ, ದಳಮುಖಾದಿತ್ಯ ಇತ್ಯಾದಿ (ಇದೂ ಪೂರ್ವಕವಿಪ್ರಯೋಗವೇ).

ಗಮಕ ಸಮಾಸ- ಆ ಮನುಷ್ಯ, ಯಾವ ಪುಸ್ತಕ, ಹಾಡುವ ಭ್ರಮರ, ಬಿಳಿಯ ವಸ್ತ್ರ.

ಕ್ರಿಯಾ ಸಮಾಸ - ಕಾವ್ಯ ಬರೆದನು, ಸತ್ಯ ನುಡಿದನು.

## ಸಮಾಸ ಭೇದಗಳು

**ತತ್ಪುರುಷ, ಬಹುವ್ರೀಹಿ, ದ್ವಂದ್ವ, ಅವ್ಯಯೀಭಾವ**ಗಳೆಂದು ಸಮಾಸವು ನಾಲ್ಕುವಿಧ. ಮುಂದೆ ಬಹುವ್ರೀಹಿ ಸಮಾಸದವರೆಗೆ ಹೇಳುವ ಕರ್ಮಧಾರಯ, ದ್ವಿಗು, ಅಂಶಿ, ಗಮಕ, ಕ್ರಿಯಾ, ಉಪಪದಸಮಾಸಗಳು ತತ್ಪುರುಷ ಸಮಾಸದ

ಭೇದಗಳು. ಅಲುಕ್ ಸಮಾಸವೂ ತತ್ಪುರುಷವೇ. ಅರಿಸಮಾಸವು ಲಕ್ಷಣಾನುಸಾರವಾಗಿ ಮೇಲ್ಕಂಡ ನಾಲ್ಕು ಭೇದಗಳಲ್ಲೊಂದಾಗಬಹುದು. ಅದನ್ನು ಪ್ರತ್ಯೇಕವಾಗಿ ಗಣಿಸಬೇಕಾಗಿಲ್ಲ.

ಸಮಾಸವನ್ನು ಇನ್ನೊಂದು ರೀತಿಯಲ್ಲಿ ವಿಂಗಡಿಸಬಹುದು. ಹೇಗೆಂದರೆ:

೧. ಪೂರ್ವಪದಾರ್ಥಪ್ರಧಾನ - ಅವ್ಯಯೀಭಾವ, ಅಂಶಿ

೨. ಉತ್ತರಪದಾರ್ಥಪ್ರಧಾನ - ತತ್ಪುರುಷ (ಅಂಶಿ ಸಮಾಸವನ್ನು ಬಿಟ್ಟು), ಆದರೆ ಭೇದಗಳಾದ ಕರ್ಮಧಾರಯ ಮೊದಲಾದವು.

೩. ಉಭಯಪದಾರ್ಥ ಪ್ರಧಾನ - ದ್ವಂದ್ವ

೪. ಅನ್ಯಪದಾರ್ಥಪ್ರಧಾನ - ಬಹುವ್ರೀಹಿ

ಇದು ಸಾಮಾನ್ಯವಾದ ವಿಂಗಡಣೆ. ಪೂರ್ವಪದಾರ್ಥಪ್ರಾಧಾನ್ಯ ಮೊದಲಾದದ್ದು ಅಲ್ಲಲ್ಲಿ ವ್ಯತ್ಯಾಸಗೊಳ್ಳುತ್ತದೆ.

## ೧. ತತ್ಪುರುಷ

೧. ಎರಡು ನಾಮಪದಗಳು ಸೇರಿ ಸಮಾಸವಾದಾಗ ಉತ್ತರಪದದ ಅರ್ಥವು ಪ್ರಧಾನವಾಗಿದ್ದರೆ ತತ್ಪುರುಷವೆಂದು ಹೆಸರು.

ಉದಾ : **ಕನ್ನಡ** : ಮಲ್ಲಿಗೆಯ ಹೂ = ಮಲ್ಲಿಗೆ ಹೂ

ಮಳೆಯ ಕಾಲ = ಮಳೆಗಾಲ

ಮನೆಯ ಕೆಲಸ = ಮನೆಗೆಲಸ

ತಲೆಯಲ್ಲಿ ನೋವು = ತಲೆನೋವು

ಹರಟೆಯಲ್ಲಿ ಮಲ್ಲ = ಹರಟೆಮಲ್ಲ.

ಮೆಣಸಿನ ಬಳ್ಳಿ, ಬೇಲದ ಮರ, ಚಿಕ್ಕಮಗಳೂರು - ಮೊದಲಾದವು ಅಲುಕ್ ಸಮಾಸಗಳು. ಇದರಲ್ಲಿ ಪೂರ್ವಪದದ ವಿಭಕ್ತಿಗೆ ಲೋಪಬರುವುದಿಲ್ಲ.

**ಸಂಸ್ಕೃತ:** ಕಷ್ಟವನ್ನು ಶ್ರಿತ = ಕಷ್ಟಶ್ರಿತ

ಕವಿಗಳಿಂದ ಸ್ತುತ = ಕವಿಸ್ತುತ

ಪ್ರಜೆಗಳಿಗೆ ಹಿತ = ಪ್ರಜಾಹಿತ

ಚೋರರ ದೆಸೆಯಿಂದ ಭಯ = ಚೋರಭಯ

ವಿದ್ಯೆಯ ಅಭ್ಯಾಸ = ವಿದ್ಯಾಭ್ಯಾಸ

ಕಾರ್ಯದಲ್ಲಿ ದಕ್ಷ = ಕಾರ್ಯದಕ್ಷ

**ವಿಶೇಷ:**

ತತ್ಪುರುಷದಲ್ಲಿ ವಿಗ್ರಹವಾಕ್ಯದ ಪೂರ್ವಪದದಲ್ಲಿನ ವಿಭಕ್ತಿಯನ್ನನುಸರಿಸಿ ದ್ವಿತೀಯಾತತ್ಪುರುಷ, ತೃತೀಯಾತತ್ಪುರುಷ- ಮುಂತಾದ ವ್ಯವಹಾರವಿದೆ.

ಭೋಜನಕ್ಕಾಗಿ ಇದು = ಭೋಜನಾರ್ಥ

ವ್ಯವಹಾರಕ್ಕಾಗಿ ಇದು = ವ್ಯವಹಾರಾರ್ಥ

ಈ ಬಗೆಯ ಸಮಾಸವೂ ತತ್ಪುರುಷವೇ.

## ೨. ಕರ್ಮಧಾರಯ

ಒಂದೇ ವಿಭಕ್ತಿಯುಳ್ಳ ವಿಶೇಷಣ ವಿಶೇಷ್ಯಗಳಿಗೆ ಆಗುವ ಸಮಾಸಕ್ಕೆ ಕರ್ಮಧಾರಯವೆಂದು ಹೆಸರು. ಇದರಲ್ಲಿ ವಿಶೇಷ್ಯವು ಪ್ರಧಾನವಾಗಿರುತ್ತದೆ.

ಉದಾ : **ಕನ್ನಡ** : ಹಿರಿದು ಮರ = ಹೆಮ್ಮರ

ಹಿರಿದು ಬಾಗಿಲು = ಹೆಬ್ಬಾಗಿಲು

ಮೆಲ್ಲಿತು ನುಡಿ = ಮೆಲ್ನುಡಿ

ಇನಿದು ಮಾವು = ಇಮ್ಮಾವು

**ಸಂಸ್ಕೃತ:** ನೀಲವಾದ ಉತ್ಪಲ = ನೀಲೋತ್ಪಲ

ಶ್ವೇತವಾದ ಛತ್ರ = ಶ್ವೇತಚ್ಛತ್ರ

ಫಲವೇ ಆಹಾರ = ಫಲಾಹಾರ

ಗಂಗಾ ಎಂಬ ನದಿ = ಗಂಗಾನದಿ

ಉಪಮಾನ ಉಪಮೇಯಗಳಿಗೆ ಕರ್ಮಧಾರಯ ಸಮಾಸವಾಗುತ್ತದೆ. ಕೆಲವೆಡೆ ಉಪಮಾನವೂ ಕೆಲವೆಡೆ ಉಪಮೇಯವೂ ಪೂರ್ವಪದವಾಗಿರುತ್ತದೆ. ಎರಡರಲ್ಲಿಯೂ ಉಪಮೇಯವೇ ಪ್ರಧಾನ.

ಉದಾ : ೧. ಉಪಮಾನ ಪೂರ್ವಪದ

ತಾವರೆಯಂತೆ ಕಣ್ಣು = ತಾವರೆಗಣ್ಣು

ಬಿಂಬದಂತೆ ಅಧರ = ಬಿಂಬಾಧರ

೨. ಉಪಮೇಯ ಪೂರ್ವಪದ

ಅಡಿಯು ತಾವರೆಯಂತೆ = ಅಡಿದಾವರೆ

ಮುಖವು ಕಮಲದಂತೆ = ಮುಖಕಮಲ

ಪುರುಷನು ಸಿಂಹದಂತೆ = ಪುರುಷಸಿಂಹ

**ವಿಶೇಷ :**

ಅಡಿಯೇ ತಾವರೆ = ಅಡಿದಾವರೆ, ಮುಖವೇ ಕಮಲ = ಮುಖಕಮಲ

ಈ ರೀತಿಯಲ್ಲಿಯೂ ವಿಗ್ರಹವನ್ನು ಹೇಳಬಹುದು. ಇದು ರೂಪಕಾಲಂಕಾರ. ಇದರಲ್ಲಿ ಉತ್ತರಪದವೇ ಪ್ರಧಾನ.

## ೩. ದ್ವಿಗು.

ಸಂಖ್ಯೆಯು ಪೂರ್ವಪದವಾಗಿರುವ ಕರ್ಮಧಾರಯಕ್ಕೆ ದ್ವಿಗುವೆಂದು ಹೆಸರು.

ಉದಾ : **ಕನ್ನಡ:** ಒಂದು ಕಣ್ಣು = ಒಕ್ಕಣ್ಣು

ಮೂರು ಮಡಿ = ಮುಮ್ಮಡಿ

ಮೂರು ಗಾವುದ = ಮೂಗಾವುದ

ಎರಡು ಬಗೆ = ಇಬ್ಬಗೆ

**ಸಂಸ್ಕೃತ:** ತ್ರಿಭುವನ, ಚತುರ್ಯುಗ, ಪಂಚೇಂದ್ರಿಯ, ಷಡಂಗ, ಸಪ್ತಸ್ವರ.

## ೪. ಅಂಶಿ ಸಮಾಸ

ಅಂಶವೆಂದರೆ ಭಾಗ ಅಥವಾ ಅವಯವ. ಅಂಶಿಯೆಂದರೆ ಭಾಗದಿಂದ ಕೂಡಿದ ವಸ್ತು ಅಥವಾ ಅವಯವಿ. ಅಂಶವು ಅಂಶಿಯೊಡನೆ ಹೊಂದುವ ಸಮಾಸ **ಅಂಶಿಸಮಾಸ**. ಇದರಲ್ಲಿ ಅಂಶವು ಪೂರ್ವಪದವಾಗಿದ್ದು ಪ್ರಧಾನವಾಗಿರುತ್ತದೆ.

ಉದಾ: **ಕನ್ನಡ:** ಕಾಲಿನ ಮುಂದು = ಮುಂಗಾಲು

(ಇಲ್ಲಿ ಕಾಲು ಅಂಶಿ, ಮುಂದು ಅಂಶ)

ಕೈಯ ಅಡಿ = ಅಂಗೈ

ತಲೆಯ ಮುಂದು = ಮುಂದಲೆ

ಮೈಯ ಹೊರಗು = ಹೊರಮೈ

ತುಟಿಯ ಕೆಳಗು = ಕೆಳದುಟಿ

**ಸಂಸ್ಕೃತ:** ಕಾಯದ ಪೂರ್ವ = ಪೂರ್ವಕಾಯ

ಅಹಸ್ಸಿನ ಮಧ್ಯ = ಮಧ್ಯಾಹ್ನ

ಅಹಸ್ಸಿನ ಸಾಯ (ಅಂತ್ಯ)= ಸಾಯಾಹ್ನ

ರಾತ್ರಿಯ ಮಧ್ಯ = ಮಧ್ಯರಾತ್ರ

ರಾತ್ರಿಯ ಅಪರ = ಅಪರರಾತ್ರ

## ೫. ಗಮಕ ಸಮಾಸ

ಸರ್ವನಾಮ, ಗುಣವಾಚಕ, ಕೃದಂತ, ಸಂಖ್ಯೆ- ಇವುಗಳಲ್ಲೊಂದು ಪೂರ್ವಪದವಾಗಿರುವ ಕರ್ಮಧಾರಯದ ಒಂದು ಭೇದ ಗಮಕ ಸಮಾಸ. ಪೂರ್ವ ಪದವಾದ 'ಅದು' ಶಬ್ದದ ರೂಪಗಳಿಗೆ 'ಆ' ಎಂಬುದೂ 'ಇದು' ಶಬ್ದದ ರೂಪಗಳಿಗೆ 'ಈ' ಎಂಬುದೂ ಆದೇಶವಾಗಿ ಬರುತ್ತವೆ. ಉಳಿದ ಎಲ್ಲ ಪೂರ್ವ ಪದಗಳೂ ಅಕಾರಾಂತವಾಗಿ ನಿಲ್ಲುತ್ತವೆ. ಇದರಲ್ಲಿ ಅರಿಸಮಾಸ ದೋಷವಿಲ್ಲ.

ಉದಾ : **ಸರ್ವನಾಮಕ್ಕೆ :** ಅವನು ಹುಡುಗ = ಆ ಹುಡುಗ

ಅವರು ಹುಡುಗರು = ಆ ಹುಡುಗರು

ಇವಳು ಹುಡುಗಿ = ಈ ಹುಡುಗಿ

ಇದು ಪುಸ್ತಕ = ಈ ಪುಸ್ತಕ

ಯಾವನು ಕವಿ = ಯಾವ ಕವಿ

ಯಾವಳು ಸ್ತ್ರೀ = ಯಾವ ಸ್ತ್ರೀ

ಯಾವುದು ಮರ = ಯಾವ ಮರ

**ಗುಣವಾಚಕಕ್ಕೆ:** ಬಿಳಿಯದು ಬಟ್ಟೆ = ಬಿಳಿಯ ಬಟ್ಟೆ

ಹೊಸದು ಕನ್ನಡ = ಹೊಸಗನ್ನಡ

ಹಸಿಯದು ಕಾಯಿ= ಹಸಿಯ ಕಾಯಿ

ಕಿರಿಯವಳು ಮಗಳು = ಕಿರಿಯ ಮಗಳು

**ಕೃದಂತಕ್ಕೆ :** ಓದುವವನು ಹುಡುಗ = ಓದುವ ಹುಡುಗ

ತೂಗುವುದು ತೊಟ್ಟಿಲು = ತೂಗುವ ತೊಟ್ಟಿಲು

ಕಡಿಯುವುದು ಕೊಡಲಿ = ಕಡಿಯುವ ಕೊಡಲಿ

ಈಜುವುದು ಕೊಳ = ಈಜುವ ಕೊಳ

**ಸಂಖ್ಯೆಗೆ:** ೧. ಇಪ್ಪತ್ತು (ಹೆಚ್ಚಾದ) ಐದು = ಇಪ್ಪತ್ತೈದು

ಮೂವತ್ತು (ಹೆಚ್ಚಾದ) ಆರು = ಮೂವತ್ತಾರು

ಅಥವಾ

೨. ಇಪ್ಪತ್ತರ (ಮೇಲೆ) ಐದು = ಇಪ್ಪತ್ತೈದು

ಮೂವತ್ತರ (ಮೇಲೆ) ಆರು = ಮೂವತ್ತಾರು

ಮೊದಲನೆಯ ವಿಗ್ರಹದಲ್ಲಿ ಕರ್ಮಧಾರಯ. ಎರಡನೆಯ ವಿಗ್ರಹದಲ್ಲಿ ಷಷ್ಠೀ ತತ್ಪುರುಷ. ಉಭಯಪಕ್ಷದಲ್ಲಿಯೂ ಮಧ್ಯಮಪದ ಲೋಪಸಮಾಸ.*

## ೬. ಕ್ರಿಯಾ ಸಮಾಸ

ಕಾರಕವು ಧಾತುವಿನೊಡನೆ ಸಮಾಸ ಹೊಂದುತ್ತದೆ. ಇದು **ಕ್ರಿಯಾಸಮಾಸ.** ಅನಂತರ ಈ ಕ್ರಿಯಾಸಮಾಸದ ಧಾತುವಿಗೆ ಇತರ ಧಾತುವಿನಂತೆ ಆಖ್ಯಾತ ಪ್ರತ್ಯಯವೋ ಕೃತ್ ಪ್ರತ್ಯಯವೋ ಸೇರುತ್ತದೆ. ಇದರಲ್ಲಿ ಅರಿಸಮಾಸ ದೋಷವಿಲ್ಲ.

ಉದಾ : ಹಣ್ಣನ್ನು ಮಾರು = ಹಣ್ಣು ಮಾರು
ಸತ್ಯವನ್ನು ಹೇಳು = ಸತ್ಯ ಹೇಳು
ಸಾಲವನ್ನು ಕೊಡು = ಸಾಲಕೊಡು
ಮೈಯನ್ನು ತೋರು = ಮೈದೋರು
ನೀರಿನಿಂದ ಕೊಡು = ನೀರ್ಗೊಡು
ಬೇರಿನಿಂದ ಬೆರಸು = ಬೇರ್ವೆರಸು
ಕಣ್ಣಿನಿಂದ ಕೆಡು = ಕಂಗೆಡು

೧. ಆಖ್ಯಾತಪ್ರತ್ಯಯ ಸೇರುವುದಕ್ಕೆ .....ಹಣ್ಣು ಮಾರುತ್ತಾನೆ, ಹಣ್ಣು ಮಾರುತ್ತಾಳೆ, ಹಣ್ಣು ಮಾರಿದನು, ಹಣ್ಣು ಮಾರಲಿ, ಹಣ್ಣು ಮಾರಿಯಾನು, ಹಣ್ಣು ಮಾರನು, ಸತ್ಯಹೇಳಿದನು, ಸಾಲ ಕೊಟ್ಟನು, ಮೈದೋರಿದನು, ನೀರ್ಗುಡಿಯಿತು, ಬೇರ್ವೆರೆಸಿತು, ಕಂಗೆಟ್ಟನು, ಕಂಗೆಡುವಳು, ಕಂಗೆಡನು.

೨. ಕೃತ್ ಪ್ರತ್ಯಯ ಸೇರುವುದಕ್ಕೆ - ಹಣ್ಣು ಮಾರುವವನು, ಹಣ್ಣು ಮಾರುವವಳು, ಸತ್ಯ ಹೇಳಿದವನು, ಸಾಲಕೊಟ್ಟವರು, ಮೈದೋರಿ, ಮೈದೋರಲು, ನೀರ್ಗೊಡಿ, ಬೇರ್ವೆರೆಸಿ, ಬೇರ್ವೆರೆಸಿದ, ಕಂಗೆಟ್ಟು, ಕಂಗೆಟ್ಟವನು, ಕಂಗೆಡಲು, ಕಂಗೆಡದೆ.

## ೭. ಉಪಪದ ಸಮಾಸ

ಕಾರಕವು ಕೃದಂತದೊಡನೆ ಹೊಂದುವ ಸಮಾಸಕ್ಕೆ **ಉಪಪದಸಮಾಸ**ವೆಂದು ಹೆಸರು. ಇದು ಸಂಸ್ಕೃತದಲ್ಲಿ ಪ್ರಸಿದ್ಧ.

---

* ಗಮಕ ಸಮಾಸದಲ್ಲಿ ವಿಗ್ರಹವಾಕ್ಯವು ಸಮಾಸಾರ್ಥವನ್ನು ನೇರವಾಗಿ ಬೋಧಿಸುವುದಿಲ್ಲ. ಆದ್ದರಿಂದಲೇ ಸಮಾಸವನ್ನು ಉಪಯೋಗಿಸುವಂತೆ ವಿಗ್ರಹವಾಕ್ಯವನ್ನು ವಾಕ್ಯದಲ್ಲಿ ಉಪಯೋಗಿಸಲಾಗುವುದಿಲ್ಲ. ವಿಗ್ರಹವು ಗಮಕ ಸಮಾಸಾರ್ಥವು ಗಮ್ಯ. ಇದರಲ್ಲಿ ಅರಿಸಮಾಸ ದೋಷವಿಲ್ಲ. ಉಳಿದ ಕರ್ಮಧಾರಯದಲ್ಲಿ ಅರಿಸಮಾಸ ದೋಷವಿದೆ. ಆದ್ದರಿಂದ ಕೇಶಿರಾಜನು ಇದಕ್ಕೆ ಗಮಕಸಮಾಸವೆಂದು ಹೆಸರಿಟ್ಟು ಪ್ರತ್ಯೇಕವಾಗಿ ಗಣಿಸಿದ್ದಾನೆ.

ಕುಂಭಕಾರ, ಭುಜಂಗಮ, ಮದ್ಯಪಾಯೀ, ನಿಶಾಕರ.

ಕನ್ನಡದಲ್ಲಿ ಹಣ್ಣು ಮಾರುವವನು, ಆಟವಾಡುವವಳು- ಮೊದಲಾದವು ಈ ವಿಭಾಗಕ್ಕೆ ಸೇರಬಹುದಾದರೂ ಕ್ರಿಯಾಸಮಾಸವನ್ನು ಒಪ್ಪಿರುವುದರಿಂದ ಅದರಲ್ಲಿಯೇ ಇವು ಸೇರುತ್ತವೆ.

ಮೇಲೆ ತಿಳಿಸಿದವುಗಳೆಲ್ಲವೂ ತತ್ಪುರುಷದ ಭೇದಗಳು. ದ್ವಿಗು ಮತ್ತು ಗಮಕಗಳು ಕರ್ಮಧಾರಯದ ಒಳಭೇದಗಳು. ಸಂಸ್ಕೃತದಲ್ಲಿ **ನಞಸಮಾಸ**ವೆಂಬ ಕರ್ಮಧಾರಯದ ಒಂದು ಭೇದವಿದೆ.

ಉದಾ : ನ + ಜ್ಞಾನ = ಅಜ್ಞಾನ

ಹೀಗೆಯೇ ಅನಿತ್ಯ, ಅಮಂಗಲ, ಅವಿದ್ಯಾ, ಅಪಾತ್ರ - ಮೊದಲಾದವು.

ಕುಪುರುಷ, ದುರ್ಜನ, ಸುಜನ - ಮೊದಲಾದವು ಕರ್ಮಧಾರಯ, ನಿರತಿಶಯ, ರಾಶೀಕೃತ - ಮೊದಲಾದವು ತತ್ಪುರುಷ.

### ೮. ಬಹುವ್ರೀಹಿ

೧. ನಾಮಪದಗಳು ಸೇರಿ ಸಮಾಸವಾದಾಗ ಅನ್ಯಪದಾರ್ಥವು ಪ್ರಧಾನವಾಗಿ ತೋರಿದರೆ **ಬಹುವ್ರೀಹಿ** ಸಮಾಸವಾಗುತ್ತದೆ.

ಉದಾ : **ಕನ್ನಡ** : ಓರೆ ಕಣ್ಣು ಯಾರಿಗುಂಟೋ ಅವನು = ಓರೆಗಣ್ಣ
ಡೊಂಕು ಕಾಲು ಯಾರಿಗುಂಟೋ ಅವನು = ಡೊಂಕುಗಾಲ
ನಿಡಿದು ಮೂಗು ಯಾರಿಗುಂಟೋ ಅವನು = ನಿಡಿಮೂಗ
ಹಣೆಯಲ್ಲಿ ಕಣ್ಣು ಯಾರಿಗುಂಟೋ ಅವನು = ಹಣೆಗಣ್ಣ

**ಸಂಸ್ಕೃತ:** ಪೀತವಾದ ಅಂಬರ ಯಾರಿಗೋ ಅವನು = ಪೀತಾಂಬರ
ಚಕ್ರವು ಪಾಣಿಯಲ್ಲಿ ಯಾರಿಗೋ ಅವನು = ಚಕ್ರಪಾಣಿ

ಹೀಗೆಯೇ ಪಂಚಮುಖ, ಷಣ್ಮುಖ, ಮಯೂರವಾಹನ, ವಜ್ರಪಾಣಿ ಮೊದಲಾದವು.

ಪೂರ್ವಪದವು ಉಪಮಾನವಾಗಿರುವುದೂ ಉಂಟು.

ಉದಾ: ಚಂದ್ರನಂತೆ ಮುಖವು ಯಾರಿಗೋ ಅವಳು = ಚಂದ್ರಮುಖಿ
ಕಮಲದಂತೆ ನೇತ್ರವು ಯಾರಿಗೋ ಅವಳು = ಕಮಲನೇತ್ರೆ
ಗಜದ ಮುಖದಂತೆ ಮುಖವು ಯಾರಿಗೋ ಅವನು = ಗಜಮುಖ
ಮೃಗದ ನಯನದಂತೆ ನಯನವು ಯಾರಿಗೋ ಅವಳು = ಮೃಗನಯನೆ

ಗಜಮುಖ, ಮೃಗನಯನೆ - ಎಂಬ ಉದಾಹರಣೆಯಲ್ಲಿ ನಡುವೆ ಇರುವ ಮುಖ, ನಯನ ಶಬ್ದಗಳು ಲೋಪಗೊಂಡಿವೆ.

೨. ಸಂಖ್ಯಾಶಬ್ದಗಳಿಗೆ ವಿಕಲ್ಪಾರ್ಥದಲ್ಲಿ ಬಹುವ್ರೀಹಿ ಸಮಾಸ ಬರುತ್ತದೆ.

ಉದಾ : **ಕನ್ನಡ:** ಎರಡೊ ಮೂರೋ = ಎರಡು ಮೂರು

ನಾಲ್ಕೋ ಐದೋ = ನಾಲ್ಕೈದು

ಅನಿರ್ದಿಷ್ಟಾರ್ಥದಲ್ಲಿಯೂ ಈ ಸಮಾಸ ಬರುತ್ತದೆ.

ಉದಾ : ನೂರಾರು, ಸಾವಿರಾರು

**ಸಂಸ್ಕೃತ:** ದ್ವಿತ್ರ, ಪಂಚಷ

೩. ಜಗಳವನ್ನು ಅಥವಾ ಯುದ್ಧವನ್ನು ಬೋದಿಸುವಾಗ ಅದಕ್ಕೆ ಸಾಧನವಾದ ಒಂದೇ ಬಗೆಯ ಶಬ್ದಗಳಿಗೆ ಸಮಾಸವಾಗುತ್ತದೆ. ಇದಕ್ಕೆ **ಕರ್ಮವ್ಯತೀಹಾರ ಬಹುವ್ರೀಹಿ**ಯೆಂದು ಹೆಸರು.

ಉದಾ: **ಕನ್ನಡ:**

ಹಣೆಯನ್ನು ಹಣೆಯನ್ನು ಚಚ್ಚಿ ಮಾಡುವ ಜಗಳ=ಹಣಾಹಣಿ

ಕೋಲಿಂದ ಕೋಲಿಂದ ಹೊಡೆದು ಮಾಡುವ ಜಗಳ = ಕೋಲಾಕೋಲಿ

**ಸಂಸ್ಕೃತ:**

ಕೇಶಾಕೇಶಿ, ದಂಡಾದಂಡಿ, ಖಡ್ಗಾಖಡ್ಗಿ

೪. ದಿಗ್ವಾಚಕ ಶಬ್ದಗಳು ಅವುಗಳ ಅಂತರಾಳದ (ನಡುವಿನ) ದಿಕ್ಕನ್ನು ಬೋಧಿಸುವಾಗ ಸಮಾಸಗೊಳ್ಳುತ್ತವೆ. ಇದು **ದಿಗಂತರಾಳ ಬಹುವ್ರೀಹಿ.**

ಉದಾ : ಪೂರ್ವದ ಮತ್ತು ಉತ್ತರದ ನಡುವಿನ ದಿಕ್ಕು = ಪೂರ್ವೋತ್ತರ

ದಕ್ಷಿಣ ಮತ್ತು ಪೂರ್ವದ ನಡುವಿನ ದಿಕ್ಕು= ದಕ್ಷಿಣಪೂರ್ವ

೫. ಸಹಶಬ್ದವು 'ಅದರಿಂದ ಸಹಿತ' ಎಂಬ ಅರ್ಥದಲ್ಲಿ ನಾಮಪದದೊಡನೆ ಸಮಾಸ ಹೊಂದುತ್ತವೆ. ಸಹಶಬ್ದಕ್ಕೆ 'ಸ' ಎಂಬ ಆದೇಶ ಬರುತ್ತದೆ.

ಉದಾ : ಪುತ್ರನಿಂದ ಸಹಿತ = ಸಪುತ್ರ

ಪತ್ನಿಯಿಂದ ಸಹಿತ = ಸಪತ್ನೀಕ

## ೯. ದ್ವಂದ್ವ

೧. ಎರಡು ಅಥವಾ ಹೆಚ್ಚಿನ ವಸ್ತುಗಳು ಜೊತೆಗೂಡಿ ಇನ್ನೊಂದು ಅರ್ಥದಲ್ಲಿ ಅನ್ವಯಿಸುವಾಗ ಆ ಪದಗಳಿಗೆ ಬರುವ ಸಮಾಸಕ್ಕೆ **ದ್ವಂದ್ವ ಸಮಾಸ**ವೆಂದು ಹೆಸರು. 'ಮತ್ತು' ಎಂಬುದರ ಅರ್ಥ ದ್ವಂದ್ವದಲ್ಲಿ ತೋರುತ್ತದೆ. ಈ ಸಮಾಸದಲ್ಲಿ ಎಲ್ಲ ಪದಗಳ ಅರ್ಥವೂ ಪ್ರಧಾನ.

ಉದಾ : ರಾಮ ಲಕ್ಷ್ಮಣರು ಕಾಡಿಗೆ ಹೋದರು.

ಇಲ್ಲಿ ರಾಮ ಮತ್ತು ಲಕ್ಷ್ಮಣ - ಇವರಿಗೆ ಹೋಗುವ ಕ್ರಿಯೆಯಲ್ಲಿ ಜೊತೆಗೂಡಿದ ಅನ್ವಯವಿದೆ.

ಹೂ ಹಣ್ಣು ಕಾಯಿಗಳ ಅಂಗಡಿ.

ಇಲ್ಲಿ ಹೂ, ಹಣ್ಣು ಮತ್ತು ಕಾಯಿಗಳಿಗೆ ಅಂಗಡಿ ಎಂಬುದರಲ್ಲಿ ಜೊತೆ ಗೂಡಿದ ಅನ್ವಯವಿದೆ. ಇದನ್ನು ಇತರೇತರ **ಯೋಗದ್ವಂದ್ವ** ಎನ್ನುತ್ತಾರೆ.

ಉದಾ : **ಕನ್ನಡ** :

ಹೊಲ ಮತ್ತು ಗದ್ದೆ = ಹೊಲಗದ್ದೆಗಳು

ಗಿಡ, ಮರ, ಬಳ್ಳಿ ಮತ್ತು ಪೊದೆ = ಗಿಡಮರಬಳ್ಳಿ ಪೊದೆಗಳು

ಆನೆ, ಕುದುರೆ ಮತ್ತು ಒಂಟೆ = ಆನೆ ಕುದುರೆ ಒಂಟೆಗಳು

**ಸಂಸ್ಕೃತ:**

ರಾಮ ಲಕ್ಷ್ಮಣರು, ಸೂರ್ಯಚಂದ್ರನಕ್ಷತ್ರಗಳು, ಗಜತುರಗಗಳು, ವೃಕ್ಷಲತೆಗಳು.

೨. ಸಮುದಾಯಾರ್ಥದಲ್ಲಿ ದ್ವಂದ್ವ ಬರುತ್ತದೆ. ಇದಕ್ಕೆ **ಸಮಾಹಾರ ದ್ವಂದ್ವ**ವೆಂದು ಹೆಸರು. ಸಮುದಾಯವಾದ್ದರಿಂದ ಸಮಾಸಕ್ಕೆ ಏಕವಚನ ಬರುತ್ತದೆ.*

ಉದಾ : ಹಣ್ಣು ಕಾಯಿಗಳ ಸಮುದಾಯ = ಹಣ್ಣುಕಾಯಿ

ಹುಲ್ಲು ಸೊಪ್ಪುಸದೆಗಳ ಸಮುದಾಯ = ಹುಲ್ಲುಸೊಪ್ಪುಸದೆ

---

* ಇಪ್ಪತ್ತು ಮತ್ತು ಐದು - ಇವುಗಳ ಸಮುದಾಯ ಇಪ್ಪತ್ತೈದು. ಮೂವತ್ತು ಮತ್ತು ಆರು- ಇವುಗಳ ಸಮುದಾಯ ಮೂವತ್ತಾರು. ಹೀಗೆ ಈ ಸಂಖ್ಯೆಗಳಿಗೆ ಸಮಾಹಾರ ದ್ವಂದ್ವವನ್ನು ಹೇಳಲು ಸಾಧ್ಯವಿದೆ. ಆದರೆ ಸಮುದಾಯವು ಏಕವಾದ್ದರಿಂದ ಏಕವಚನ ಬರಬೇಕಾಗುತ್ತದೆ. ಈ ಕಷ್ಟವನ್ನು ತಪ್ಪಿಸುವುದಕ್ಕಾಗಿ ಕೇಶಿರಾಜನು ಗಮಕ ಸಮಾಸದಲ್ಲಿ ಇವನ್ನು ಸೇರಿಸಿದಂತೆ ಕಾಣುತ್ತದೆ.

## ೧೦. ಅವ್ಯಯೀಭಾವ

ಅವ್ಯಯುವು ನಾಮಪದದೊಡನೆ ಸಮಾಸಗೊಂಡಾಗ ಸಮಾಸವೇ ಅವ್ಯಯವಾಗಿ ನಿಂತರೆ **ಅವ್ಯಯೀಭಾವಸಮಾಸ**ವೆಂದು ಹೆಸರು. ತಲೆಯ ಮುಂದು= ಮುಂದಲೆ, ಮುಂತಾದ ಅಂಶಿಸಮಾಸವು ಅವ್ಯಯೀಭಾವವೆಂದು ಹೇಳುವುದುಂಟು. ಇದು ಅವ್ಯಯದೊಡನೆ ಆದ ಸಮಾಸ. ಅವ್ಯಯೀಭಾವಕ್ಕೆ ಸಂಸ್ಕೃತದಲ್ಲಿ ಮುಖ್ಯ ಉದಾಹರಣೆಗಳು ದೊರೆಯುತ್ತವೆ. ಯಾವುವೆಂದರೆ -

ಶಕ್ತಿಯನ್ನು ಮೀರದೆ - ಯಥಾಶಕ್ತಿ

ಮರಣದವರೆಗೆ - ಆಮರಣ

ಜನ್ಮದಿಂದ ಆರಂಭಿಸಿ - ಆಜನ್ಮ

ವೃಕ್ಷ ವೃಕ್ಷವನ್ನು - ಪ್ರತಿವೃಕ್ಷ

ಇವು ಸಂಸ್ಕೃತದಲ್ಲಿ ಅವ್ಯಯಗಳು. ಕೆಲವಕ್ಕೆ ಕನ್ನಡದಲ್ಲಿ ನಾಮಪದದಂತೆ ವಿಭಕ್ತಿ ಸೇರುತ್ತದೆ.

ಉದಾ: ಪ್ರತಿವೃಕ್ಷವನ್ನು, ಪ್ರತಿನಗರಕ್ಕೆ, ಪ್ರತಿಪುಸ್ತಕದಲ್ಲಿ

## ಅರಿಸಮಾಸ

ಇದರ ವಿಚಾರವಾಗಿ ಹಿಂದೆ ಬರೆದಿದೆ. ಇದು ಬೇರೆ ಬೇರೆ ಸಮಾಸದಲ್ಲಿ ಸೇರಿ ಹೋಗುತ್ತದೆ.

೧. ತತ್ಪುರುಷ - ಮಳೆಗಾಲ, ತುರುಗದಳ, ಮಂಗಳಾರತಿ, ದಳಪತಿ

೨. ಕರ್ಮಧಾರಯ- ಕಡುರಾಗ, ಕೂರಸಿ, ಮಾರ್ಬಲ, ಮಾಕಾಳಿ

೩. ದ್ವಿಗು - ಇಕ್ಕೆಲ, ಇಬ್ಭಾಗ, ನಾಲ್ಕು ದಿಕ್ಕು.

೪. ಗಮಕ - ಹಿರಿಯ ಮನುಷ್ಯ, ಹಾಡುವ ಭ್ರಮರ, ಆ ಗ್ರಂಥ.

೫. ಕ್ರಿಯಾ - ಬುದ್ಧಿಯುಳ್ಳವನು, ಸತ್ಯ ಹೇಳತಕ್ಕವನು

೬. ಬಹುವ್ರೀಹಿ - ನರಲೋಕದಲ್ಲಣ, ರಾಯಕೋಲಾಹಲ

## ಏಕಶೇಷ

ಸರ್ವನಾಮಗಳಿಗೆ ದ್ವಂದ್ವಸಮಾಸವು ಬರುವುದಿಲ್ಲ 'ನಾನು ಮತ್ತು ನೀನು = ನಾನು ನೀವು, ನೀನು ಮತ್ತು ಅವರು = ನೀನವರು' ಹೀಗೆ ಸಮಾಸವಾಗುವುದಿಲ್ಲ.

'ನಾನು ಮತ್ತು ರಾಮ' ಇಲ್ಲಿಯೂ ದ್ವಂದ್ವವಿಲ್ಲ. ಇಂಥ ಸಂದರ್ಭದಲ್ಲಿ ಒಂದು ಸರ್ವನಾಮ ಉಳಿದು, ಇತರ ಸರ್ವನಾಮಗಳೂ ನಾಮಪದಗಳೂ ಲುಪ್ತವಾಗುತ್ತವೆ. ಈ ರೀತಿ ಒಂದು ಉಳಿಯುವುದಕ್ಕೆ **ಏಕಶೇಷ**ವೆಂದೂ ಹೆಸರು. ಇದರ ವ್ಯವಸ್ಥೆ ಹೇಗೆಂದರೆ -

೧. 'ನಾನು' ಶಬ್ದದ ಸಹಯೋಗವಿದ್ದಲ್ಲಿ ಎಲ್ಲೆಡೆಯೂ ನಾನು ಶಬ್ದವೇ ಉಳಿಯುತ್ತದೆ.

ಉದಾ : ನಾನು ಮತ್ತು ನೀನು = ನಾವು

ನಾನು ಮತ್ತು ಅವರು = ನಾವು

ನಾನು, ನೀನು, ಅವಳು ಮತ್ತು ರಾಮ = ನಾವು

ನಾನು ಮತ್ತು ನಮ್ಮವರು = ನಾವು

ನಾವುಗಳು ಎಂಬ ರೂಪವೂ ಬಳಕೆಯಲ್ಲಿದೆ.

೨. 'ನಾನು' ಶಬ್ದವಿಲ್ಲದಾಗ 'ನೀನು' ಶಬ್ದದ ಸಹಯೋಗವಿದ್ದಲ್ಲಿ 'ನೀನು' ಶಬ್ದವೇ ಉಳಿಯುತ್ತದೆ.

ಉದಾ : ನೀನು ಮತ್ತು ಅವನು = ನೀವು

ನೀನು ಇವನು ಮತ್ತು ವಿಮಲೆ = ನೀವು

ನೀನು, ಇವಳು ಮತ್ತು ಅದು = ನೀವು

ಇವುಗಳು ಎಂಬ ರೂಪವೂ ಬಳಕೆಯಲ್ಲಿದೆ.

೩. (ಅ) ಪ್ರಥಮ ಪುರುಷದ ಸರ್ವನಾಮವೂ ಇತರ ನಾಮಪದಗಳೂ ಇದ್ದಲ್ಲಿ ಸರ್ವನಾಮವೇ ಉಳಿಯುತ್ತದೆ.

ಉದಾ : ಅವನು, ವೆಂಕಟ ಮತ್ತು ಗೌರಿ = ಅವರು, ಅವರುಗಳು

ಇದು, ಎಮ್ಮೆ ಮತ್ತು ಹಸು = ಇವು, ಇವುಗಳು.

(ಆ) ನಪುಂಸಕದೊಡನೆ ಸೇರಿದಾಗ ಪುಲ್ಲಿಂಗ ಅಥವಾ ಸ್ತ್ರೀಲಿಂಗವೂ ಅದರಲ್ಲಿಯೂ ಸಮೀಪಸ್ಥವಾಚಿಯಾದ 'ಇದು' ಶಬ್ದದ ರೂಪವೂ ಉಳಿಯುತ್ತದೆ.

ಉದಾ : ಅದು ಮತ್ತು ಇದು = ಇವು

ಅವನು ಮತ್ತು ಅದು = ಅವರು

ಆಕೆ ಮತ್ತು ಇವನು = ಇವರು, ಇವರುಗಳು

ಆಕೆ, ಇವನು ಮತ್ತು ಅದು = ಇವರು, ಇವರುಗಳು

ಏಕಶೇಷವಾದಾಗ ಉಳಿದುಕೊಂಡ ಶಬ್ದವು ಬಹುವಚನದಲ್ಲಿರುತ್ತವೆ.



## ಕ್ರಿಯಾಪದ ಪ್ರಕರಣ

ಕ್ರಿಯಾಪದದ ಮೂಲರೂಪಕ್ಕೆ ಧಾತುವೆಂದು ಹೆಸರು. ಇದು ಕ್ರಿಯಾ ಬೋಧಕವಾಗಿರುತ್ತದೆ. ಧಾತುಗಳಲ್ಲಿ ಮೂಲಧಾತು, ಸಾಧಿತಧಾತು ಎಂದು ಎರಡು ಬಗೆ. ಮೂಲಧಾತುಗಳು ಭಾಷೆಯಲ್ಲಿ ಸ್ವತಃ ಇರತಕ್ಕವು. 'ಇಸು' ಎಂಬ ಪ್ರತ್ಯಯವನ್ನು ಸೇರಿಸಿ ಸಾಧಿಸಿರುವ ಧಾತುಗಳು ಸಾಧಿತಧಾತುಗಳು. ಮೂಲಧಾತುಗಳಿಗೆ ಉದಾಹರಣೆ -

ಈ, ಕಾ, ಬಾ, ಸಾಕು, ಬದುಕು, ಮುಗಿ, ಹೋಗು, ಮಲಗು, ಅಂಜು, ಈಜು, ಉಜ್ಜು, ದಾಟು, ಹುಟ್ಟು, ಮೆಟ್ಟು, ನುಡಿ, ಹಿಡಿ, ಕೊಡು, ಕುಣಿ, ಕಾಣು, ಸುತ್ತು, ಒತ್ತು, ಓದು, ಒದೆ, ತಿದ್ದು, ನೆನೆ, ಎನ್ನು, ಒಪ್ಪು, ತಪ್ಪು, ನಂಬು, ತುಂಬು, ಬಯ್, ಕೊಯ್, ಸುರಿ, ಅರಿ, ಹೀರು, ಸೋಲು, ಹೊಲಿ, ಇಳಿ, ತೊಳೆ, ಹೊಗಳು ಮುಂತಾದವು. ಗುಡಿಸು, ಬಡಿಸು, ತುರಿಸು, ಆಲಿಸು, ಮುಂತಾದವೂ ಮೂಲಧಾತುಗಳೇ. ಇವುಗಳಲ್ಲಿ 'ಇಸು' ಎಂಬುದು ಪ್ರತ್ಯಯವಲ್ಲ.

**ಸಾಧಿತ ಧಾತುಗಳಾಗುವ ಬಗೆ :**

೧. ಕಳವಳ ಮೊದಲಾದ ಪ್ರಾತಿಪದಿಕಗಳೂ ಧಗಧಗ ಮೊದಲಾದ ಅನುಕರಣ ಶಬ್ದಗಳೂ 'ಇಸು' ಪ್ರತ್ಯಯವನ್ನು ಹೊಂದಿ ಸಾಧಿತಧಾತುಗಳಾಗುತ್ತವೆ.

ಉದಾ: ಕುಪ್ಪಳಿಸು, ಕಳವಳಿಸು, ಅಬ್ಬರಿಸು, ಕನ್ನಡಿಸು, ಓಲಗಿಸು, ಧಗಧಗಿಸು, ಥಳಥಳಿಸು, ಗಮಗಮಿಸು, ಛಟಛಟಿಸು.

೨. ಯತ್ನ, ಸ್ತುತಿ ಮುಂತಾದ ಭಾವವಾಚಕಗಳಾದ ಸಂಸ್ಕೃತ ಶಬ್ದಗಳು 'ಇಸು', ಪ್ರತ್ಯಯವನ್ನು ಹೊಂದಿ ಸಾಧಿತ ಧಾತುಗಳಾಗುತ್ತವೆ.

ಉದಾ : ಯತ್ನಿಸು, ಸ್ತುತಿಸು, ಭಾವಿಸು, ಶೋಕಿಸು, ಲೋಪಿಸು, ಜಯಿಸು.

ರಕ್ಷಣ, ಪಾಲನ, ಪೋಷಣ ಮುಂತಾದ ಭಾವವಾಚಕಗಳಿಗೆ 'ಇಸು' ಪ್ರತ್ಯಯ ಸೇರಿದಾಗ, 'ಅಣ' ಅಥವಾ 'ಅನ'ಗಳಿಗೆ ಲೋಪ ಬರುತ್ತದೆ.

ಉದಾ: ರಕ್ಷಿಸು, ಪಾಲಿಸು, ಪೋಷಿಸು, ಯೋಚಿಸು, ಘೋಷಿಸು.

ಕೆಲವು ಕಡೆ 'ಅಣ' ' ಅನ' ಗಳಿಗೆ ಲೋಪವಿಲ್ಲ.

ಉದಾ : ಶಯನಿಸು, ಗಮನಿಸು.

೩. ಸಂಸ್ಕೃತ ಧಾತುಗಳಿಗೆ 'ಇಸು' ಸೇರಿ ಧಾತುಗಳಾಗುವುದೂ ಉಂಟು.

ಉದಾ : ಭುಂಜಿಸು, ರಾಜಿಸು, ವಾಸಿಸು.

ಅರ್ಥಮಾಡು ಎಂಬ ಅರ್ಥದಲ್ಲಿ ಅರ್ಥಯಿಸು ಎನ್ನುವುದು ಸಾಧುಶಬ್ದವಲ್ಲ.

೪. ಎಲ್ಲ ಧಾತುಗಳಿಗೂ ಪ್ರೇರಣಾರ್ಥದಲ್ಲಿ 'ಇಸು' ಪ್ರತ್ಯಯವು ಸೇರುತ್ತದೆ. ಇವು ಪ್ರೇರಣಾರ್ಥಕ ಸಾಧಿತಧಾತುಗಳು. ಪ್ರೇರಣೆಯೆಂದರೆ ಇನ್ನೊಬ್ಬರಿಂದ ಕ್ರಿಯೆಯನ್ನು ನಡೆಸುವುದು.

ಉದಾ : ಮಾಡಿಸು, ಕಲಿಸು, ಹೇಳಿಸು, ನುಡಿಸು, ಬರೆಯಿಸು.

'ಇಸು' ಪ್ರತ್ಯಯಕ್ಕೆ 'ಇಸು' ಪರವಾದರೆ ಮೊದಲಿನ, 'ಇಸು' ಎಂಬುದಕ್ಕೆ ಲೋಪ ಬರುತ್ತದೆ.

ಉದಾ: ರಕ್ಷಿಸು + ಇಸು = ರಕ್ಷಿಸು. ಕಲಿಸು + ಇಸು =ಕಲಿಸು

ಮೂಲಧಾತುಗಳಿಗೆ 'ಇಸು' ಪ್ರತ್ಯಯವು ಪರವಾದರೆ 'ಇಸು' ಎಂಬುದಕ್ಕೆ ಲೋಪವಿಲ್ಲ.

ಉದಾ : ಗುಡಿಸು + ಇಸು = ಗುಡಿಸಿಸು, ಬಡಿಸಿಸು, ತುರಿಸಿಸು.

೫. ಹಣ್ಣಾಮಾರು, ಕೋಪಗೊಳ್ಳು ಮೊದಲಾದವು ಮಾರು, ಕೊಳ್ಳು ಮೊದಲಾದ ಧಾತುಗಳಿಂದಾದ ಕ್ರಿಯಾಸಮಾಸದ ರೂಪಗಳು.

## ಸಕರ್ಮಕ - ಅಕರ್ಮಕ

ಮಾಡು, ಹೇಳು, ಕೂಡು- ಮೊದಲಾದ ಧಾತುಗಳು ಅರ್ಥಪೂರ್ತಿಗೆ ಕರ್ಮ ಪದವನ್ನು ಅಪೇಕ್ಷಿಸುತ್ತವೆ. ಇವುಗಳಿಂದ ಕ್ರಿಯಾಪದಗಳನ್ನು ಹೇಳಿದಾಗ ಯಾವುದನ್ನು- ಏನನ್ನು ? ಎಂಬ ಆಕಾಂಕ್ಷೆ ಹುಟ್ಟುತ್ತದೆ. ಕೆಲಸವನ್ನು ಮಾಡುತ್ತಾನೆ. ಮಾತನ್ನು ಹೇಳುತ್ತಾನೆ, ಹಣವನ್ನು ಕೊಡುತ್ತಾನೆ. ಹೀಗೆ ಕರ್ಮದೊಡನೆ ಇವಕ್ಕೆ ಸಂಬಂಧ ಬರುತ್ತದೆ. ಇಂಥ ಧಾತುಗಳು ಸಕರ್ಮಕಗಳು.

ಆದರೆ ಕೆಲವು ಧಾತುಗಳಿಗೆ ಕರ್ಮಪದದ ಸಂಬಂಧವಿರುವುದಿಲ್ಲ. ಇರು, ನಗು, ಮಲಗು, ಮುಂತಾದ ಈ ಬಗೆಯವು. ಇವು ಅಕರ್ಮಕಧಾತುಗಳು.

ಸಾಮಾನ್ಯವಾಗಿ ಈ ಅರ್ಥದ ಧಾತುಗಳು ಅಕರ್ಮಕಗಳು- ಬೆಳೆ, ಕ್ಷಯಿಸು,

ಹೆದರು, ಬದುಕು, ಸಾಯು, ನಾಚು, ಇರು, ಏಳು, ಕುಳಿತುಕೊ, ಎಚ್ಚರಗೊಳ್ಳು, ಮಲಗು, ಆಡು, ರುಚಿಸು, ಪ್ರಕಾಶಿಸು, ಅಳು ನಗು, ಆಗು - ಇತ್ಯಾದಿ.

ಅಕರ್ಮಕ ಧಾತುಗಳೂ ಸಹ ಪ್ರೇರಣಾರ್ಥದಲ್ಲಿ 'ಇಸು' ಪ್ರತ್ಯಯ ಬಂದಾಗ ಸಕರ್ಮಕ ಧಾತುಗಳಾಗುತ್ತವೆ.

ಉದಾ : ಗಿಡವನ್ನು ಬೆಳಯಿಸುತ್ತಾನೆ.

ಮಗುವನ್ನು ಮಲಗಿಸುತ್ತಾಳೆ.

## ಧಾತುಪ್ರತ್ಯಯಗಳು

ಧಾತುಗಳ ಮೇಲೆ ಆಖ್ಯಾತ, ಕೃತ್ ಎಂಬ ಎರಡು ಬಗೆಯ ಪ್ರತ್ಯಯಗಳು ಹತ್ತುತ್ತವೆ. ಆಖ್ಯಾತಪ್ರತ್ಯಯ ಬಂದಾಗ ಕ್ರಿಯಾಪದವೆಂದೂ ಕೃತ್ ಪ್ರತ್ಯಯ ಬಂದಾಗ ಕೃದಂತವೆಂದೂ ಹೆಸರು. ಕೃದಂತವು ಪ್ರಾತಿಪದಿಕ.

| ಉದಾ : ಧಾತು | ಆಖ್ಯಾತ ಪ್ರತ್ಯಯ | ಕ್ರಿಯಾಪದ | ಕೃತ್ ಪ್ರತ್ಯಯ | ಕೃದಂತ |
|---|---|---|---|---|
| ಮಾಡು | (ಉತ್ತ) ಆನೆ | ಮಾಡುತ್ತಾನೆ | ಟ, ಇಕೆ | ಮಾಟ, ಮಾಡುವಿಕೆ |
| ಕುಣಿ | (ಉತ್ತ) ಆನೆ | ಕುಣಿಯುತ್ತಾನೆ | ತ, ಇಕೆ | ಕುಣಿತ, ಕುಣಿಯುವಿಕೆ |

## ಆಖ್ಯಾತಪ್ರತ್ಯಯಗಳು

ಕನ್ನಡದಲ್ಲಿ ಕ್ರಿಯಾಪದಗಳಿಗೂ ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗಗಳಲ್ಲಿ ರೂಪಭೇದವುಂಟು. ಏಕವಚನ, ಬಹುವಚನವೆಂಬ ಎರಡು ವಚನಗಳಿವೆ. ಇವಲ್ಲದೆ ಕಾಲ, ಪುರುಷ, ಅರ್ಥಗಳಿಗೆ ಅನುಸಾರವಾಗಿ ಆಖ್ಯಾತ ಪ್ರತ್ಯಯಗಳು ಬೇರೆ ಬೇರೆಯಾಗುತ್ತವೆ.

ಕ್ರಿಯಾಪದದ ಲಿಂಗವು ಅದರೊಡನೆ ಅನ್ವಿತವಾಗುವ ನಾಮಪದದ ಲಿಂಗವನ್ನನುಸರಿಸುತ್ತದೆ. ಒಂದು ಸಂಖ್ಯೆಯನ್ನು ಬೋಧಿಸುವಾಗ ಏಕವಚನವೂ ಒಂದಕ್ಕಿಂತ ಹೆಚ್ಚು ಸಂಖ್ಯೆಯನ್ನು ಬೋಧಿಸುವಾಗ ಬಹುವಚನವೂ ಬರುತ್ತದೆ. ನಾನು, ನಾವು ಎಂಬ ಶಬ್ದಗಳೊಡನೆ ಅನ್ವಯವಿದ್ದಾಗ ಉತ್ತಮ ಪುರುಷವೂ ನೀನು, ನೀವು, ತಾವು (ನೀವು)- ಎಂಬ ಶಬ್ದಗಳೊಡನೆ ಅನ್ವಯವಿದ್ದಾಗ ಮಧ್ಯಮ ಪುರುಷವೂ ಈ ಶಬ್ದಗಳೊಡನೆ ಸಂಬಂಧವಿಲ್ಲದೆ ಇತರ ಶಬ್ದಗಳೊಡನೆ ಅನ್ವಯವಿದ್ದಾಗ ಪ್ರಥಮ ಪುರುಷವೂ ಬರುತ್ತವೆ. ಪ್ರಥಮ ಪುರುಷದಲ್ಲಿ ಮಾತ್ರ ಕ್ರಿಯಾಪದಗಳಿಗೆ ಲಿಂಗಾನುಸಾರವಾಗಿ ರೂಪಭೇಧವಿರುತ್ತದೆ.

ಆಖ್ಯಾತಪ್ರತ್ಯಯಗಳು ಬೇರೆಬೇರೆಯಾಗುವುದರಿಂದ ಕ್ರಿಯಾಪದಗಳಿಗೆ ಕಾಲಾನುಸಾರವಾಗಿ ವರ್ತಮಾನರೂಪ,ಭೂತರೂಪ, ಭವಿಷ್ಯದ್ರೂಪಗಳೆಂದೂ ಅರ್ಥಾನುಸಾರವಾಗಿ ಸಂಭಾವನಾರೂಪ, ವಿಧ್ಯಾದಿರೂಪ, ನಿಷೇಧರೂಪಗಳೆಂದೂ ಆರು ರೂಪಗಳುಂಟು.

## ೧. ವರ್ತಮಾನರೂಪ

೧. ಕ್ರಿಯೆ ನಡೆಯುತ್ತಿರುವ ಕಾಲ ವರ್ತಮಾನಕಾಲ. ಈ ಕಾಲದ ಕ್ರಿಯೆಯನ್ನು ತಿಳಿಸುವಾ ಧಾತುಗಳ ಮೇಲೆ ಕೆಳಗೆ ಕಂಡಂತೆ ಆಖ್ಯಾತ ಪ್ರತ್ಯಯಗಳು ಬರುತ್ತವೆ.

### ವರ್ತಮಾನಕಾಲ - ಆಖ್ಯಾತಪ್ರತ್ಯಯ

| | ಪುಲ್ಲಿಂಗ | | ಸ್ತ್ರೀಲಿಂಗ | | ನಪುಂಸಕಲಿಂಗ | |
|---|---|---|---|---|---|---|
| | ಏ.ವ | ಬ.ವ | ಏ.ವ. | ಬ.ವ | ಏ.ವ. | ಬ.ವ |
| ಪ್ರ. ಪುರುಷ | ಆನೆ | ಆರೆ | ಆಳೆ | ಆರೆ | ಅದೆ,ಇದೆ | ಅವೆ,ಇವೆ |
| ಮ. ಪುರುಷ | ಈಯೆ | ಈರಿ | ಈಯೆ | ಈರಿ | ಈಯೆ | ಈರಿ |
| ಉ. ಪುರುಷ | ಏನೆ | ಏವೆ | ಏನೆ | ಏವೆ | ಏನೆ | ಏವೆ |

ಧಾತುವಿಗೆ ವರ್ತಮಾನಕಾಲದ ಆಖ್ಯಾತಪ್ರತ್ಯಯ ಸೇರುವಾಗ ನಡುವೆ 'ಉತ್ತ' ಎಂಬ ವಿಕರಣಪ್ರತ್ಯಯ ಬರುತ್ತದೆ.

೨. 'ಉತ್ತ' ವಿಕರಣವು ಪರವಾದಾಗ ಧಾತುವಿನ ಉಕಾರಕ್ಕೆ ಲೋಪ ಬರುತ್ತದೆ.

ಉದಾ: ಮಾಡು + ಉತ್ತ + ಆನೆ - ಮಾಡುತ್ತಾನೆ

೩. ಉಕಾರವಲ್ಲದ ಇತರ ಸ್ವರದ ಮುಂದೆ 'ಉತ್ತ' ವಿಕರಣವು ಬಂದಾಗ ನಡುವೆ ಯಕಾರಾಗಮ ಬರುತ್ತದೆ.

ಉದಾ : ಕಾಯುತ್ತಾನೆ, ತಿಳಿಯುತ್ತಾನೆ, ಬೇಯುತ್ತದೆ.

### ವರ್ತಮಾನ ರೂಪಗಳು

| | | ಏ.ವ. | ಬ.ವ. |
|---|---|---|---|
| ಪ್ರ. | ಪುಲ್ಲಿಂಗ | ಮಾಡುತ್ತಾನೆ | ಮಾಡುತ್ತಾರೆ |
| | ಸ್ತ್ರೀಲಿಂಗ | ಮಾಡುತ್ತಾಳೆ | ಮಾಡುತ್ತಾರೆ |
| | ನಪುಂಸಕಲಿಂಗ | ಮಾಡುತ್ತದೆ | ಮಾಡುತ್ತವೆ |
| | | ಮಾಡುತ್ತಿದೆ | ಮಾಡುತ್ತಿವೆ |

| | | | |
|---|---|---|---|
| ಮ.ಪು | (ಮೂರು ಲಿಂಗಗಳಲ್ಲಿ) | ಮಾಡುತ್ತೀಯೆ | ಮಾಡುತ್ತೀರಿ |
| ಉ.ಪು | (ಮೂರು ಲಿಂಗಗಳಲ್ಲಿ) | ಮಾಡುತ್ತೇನೆ | ಮಾಡುತ್ತೇವೆ |

ಮೇಲ್ಕಂಡ ರೂಪಗಳನ್ನು ಪರೀಕ್ಷಿಸಿದಾಗ, ಪ್ರಥಮ ಪುರುಷದಲ್ಲಿ ಮಾತ್ರ ಪುಲ್ಲಿಂಗ ಸ್ತ್ರೀಲಿಂಗ ನಪುಂಸಕಲಿಂಗಗಳಲ್ಲಿ ಬೇರೆಬೇರೆರೂಪಗಳಿನೆಯೆಂದು ಗೊತ್ತಾಗುತ್ತದೆ. ಮಧ್ಯಮಪುರುಷ ಉತ್ತಮಪುರುಷಗಳಲ್ಲಿ ಮೂರು ಲಿಂಗಗಳಲ್ಲಿಯೂ ಒಂದೇ ಬಗೆಯ ರೂಪಗಳಿವೆ. ಹೀಗೆಯೇ ಎಲ್ಲ ಕಾಲದ ಮತ್ತು ಎಲ್ಲ ಅರ್ಥದ ಕ್ರಿಯಾಪದಗಳಲ್ಲಿಯೂ ಲಿಂಗದ ಸಂಬಂಧ ಪ್ರಥಮಪುರುಷದಲ್ಲಿ ಮಾತ್ರ. ಮಧ್ಯಮಪುರುಷ, ಉತ್ತಮಪುರುಷಗಳಲ್ಲಿ ಲಿಂಗಭೇದವಿಲ್ಲ ಎಂದು ತಿಳಿಯಬೇಕು.

## ೨. ಭೂತರೂಪ

೧. ಕ್ರಿಯೆ ಮುಗಿದು ಹೋದ ಕಾಲ ಭೂತಕಾಲ. ಈ ಕಾಲದ ಕ್ರಿಯೆಯನ್ನು ಬೋಧಿಸುವ ಧಾತುವಿನ ಮೇಲೆ ಕೆಳಗೆ ಕಂಡಂತೆ ಆಖ್ಯಾತಪ್ರತ್ಯಯಗಳು ಬರುತ್ತವೆ.

**ಭೂತಕಾಲ- ಆಖ್ಯಾತಪ್ರತ್ಯಯ**

| | ಪುಲ್ಲಿಂಗ | | ಸ್ತ್ರೀಲಿಂಗ | | ನಪುಂಸಕಲಿಂಗ | |
|---|---|---|---|---|---|---|
| | ಏ.ವ. | ಬ.ವ. | ಏ.ವ. | ಬ.ವ | ಏ.ವ. | ಬ.ವ |
| ಪ್ರ. ಪು. | ಅನು | ಅರು | ಅಳು | ಅರು | ಇತು | ಅವು |
| ಮ.ಪು. | ಎ | ಇರಿ | | | | |
| ಉ.ಪು | ಎ,ಎನು | ಇವು | | | | |

ಸಾಮಾನ್ಯವಾಗಿ ಭೂತರೂಪದಲ್ಲಿ ಧಾತುಗಳಿಗೂ ಆಖ್ಯಾತಪ್ರತ್ಯಯಗಳಿಗೂ ನಡುವೆ 'ಇದ' ಎಂಬ ವಿಕರಣ ಪ್ರತ್ಯಯ ಬರುತ್ತದೆ.

**ಭೂತರೂಪ**

| | | ಏ.ವ. | ಬ.ವ |
|---|---|---|---|
| ಪ್ರ.ಪು | ಪುಲ್ಲಿಂಗ | ಮಾಡಿದನು | ಮಾಡಿದರು |
| | ಸ್ತ್ರೀಲಿಂಗ | ಮಾಡಿದಳು | ಮಾಡಿದರು |
| | ನಪುಂಸಕಲಿಂಗ | ಮಾಡಿದೆ | ಮಾಡಿದವು |
| ಮ.ಪು | | ಮಾಡಿದೆ | ಮಾಡಿದಿರಿ |
| ಉ.ಪು | | ಮಾಡಿದೆ, ಮಾಡಿದೆನು | ಮಾಡಿದೆವು |

ಮೇಲ್ಕಂಡ ರೂಪಗಳಲ್ಲಿ 'ಇದ' ಎಂಬ ವಿಕರಣಪ್ರತ್ಯಯವು ಒಂದು ಸಂಧಿ

ನಿಯಮದಂತೆ ಹಿಂದಿನ ಉಕಾರಕ್ಕೆ ಲೋಪವಾಗಿದೆ. 'ಮಾಡಿತು' ಎಂಬಲ್ಲಿ ವಿಕರಣ ಪ್ರತ್ಯಯ ಬಂದಿಲ್ಲ. ನಪುಂಸಕಲಿಂಗದ ಏಕವಚನದಲ್ಲಿ 'ಇದ' ಎಂಬ ವಿಕರಣ ಪ್ರತ್ಯಯ ಬರುವುದಿಲ್ಲ.

ಎಕಾರಾಂತಧಾತುಗಳಿಗೆ ಭೂತಕಾಲದಲ್ಲಿ 'ದ' ಎಂಬ ವಿಕರಣಪ್ರತ್ಯಯ ಬರುತ್ತದೆ.

ಉದಾ: ಅಗೆ = ಅಗೆದನು, ಅರೆ=ಅರೆದನು, ಕೊರೆ=ಕೊರೆದನು.

ನಪುಂಸಕಲಿಂಗದ ಏಕವಚನದಲ್ಲಿ 'ದ' ವಿಕರಣವು ಬರುವುದಿಲ್ಲ.

ಉದಾ: ಅಗೆಯಿತು, ಅರೆಯಿತು, ಕೊರೆಯಿತು.

ಇನ್ನು ಕೆಲವು ಧಾತುಗಳಿಗೂ ವಿಕರಣ ಪ್ರತ್ಯಯಗಳಿಗೂ ಭೂತಕಾಲದಲ್ಲಿ ನಾನಾ ಬಗೆಯ ಆದೇಶಗಳು ಬರುತ್ತವೆ. ಕೆಲವು ಮುಖ್ಯವಾದ ಅಂಥ ಧಾತುಗಳನ್ನೂ ಭೂತಕಾಲದಲ್ಲಿ ಪ್ರಥಮ ಪುರುಷದ ಒಂದೊಂದು ರೂಪವನ್ನು ಕೆಳಗೆ ಬರೆದಿದೆ. ಅದರಂತೆ ಉಳಿದ ರೂಪಗಳನ್ನು ಊಹಿಸಿಕೊಳ್ಳಬಹುದು.

| ಧಾತು | ಪುಲ್ಲಿಂಗ ಏಕವಚನ | ನಪುಂಸಕ ಏಕವಚನ |
|---|---|---|
| ಅನು | ಆತನು | ಆನಿತು |
| ಆಗು | ಆದನು | ಆಯಿತು |
| ಇಡು | ಇಟ್ಟನು | ಇಟ್ಟಿತು |
| ಇರು | ಇದ್ದನು | ಇದ್ದಿತು (ಇತ್ತು) |
| ಇಸು | ಎಚ್ಚನು | |
| ಈ(ಕೊಡು) | ಇತ್ತನು | |
| ಈಯ್(ಕರುಹಾಕು) | - | ಈಯಿತು-ಈದಿತು |
| ಉಡು | ಉಟ್ಟನು | |
| ಉಣ್ಣು | ಉಂಡನು | |
| ಉಳು | ಉತ್ತನು | |
| ಎನ್ನು | ಎಂದನು | |
| ಏಳು | ಎದ್ದನು | |
| ಒಡಂಬಡು | ಒಡಂಬಟ್ಟನು | |
| ಒಯ್ಯು | ಒಯ್ದನು | |

| ಧಾತು | ಪುಲ್ಲಿಂಗ ಏಕವಚನ | ನಪುಂಸಕ ಏಕವಚನ |
|---|---|---|
| ಔತುಕೊಳ್ಳು | ಔತುಕೊಂಡನು | |
| ಕದಿ | ಕದ್ದನು | |
| ಕಲಿ | ಕಲಿತನು | |
| ಕಳಿ | - | ಕಳಿತಿತು |
| ಕಳು | ಕದ್ದನು | |
| ಕಾಯು | ಕಾಯ್ದನು, ಕಾದನು | |
| ಕಾಣು | ಕಂಡನು | |
| ಕೆಡು | ಕೆಟ್ಟನು | |
| ಕೀ | - | ಕೀತಿತು |
| ಕೀಳು | ಕಿತ್ತನು | |
| ಕೊಡು | ಕೊಟ್ಟನು | |
| ಕೊಳ್ಳು | ಕೊಂಡನು | |
| ಕೊಳೆ | - | ಕೊಳೆಯಿತು, ಕೊಳೆತಿತು |
| ಕೊಲ್ಲು | ಕೊಂದನು | |
| ಕೊಯ್ಯು | ಕೊಯ್ದನು | |
| ಗೆಲ್ಲು | ಗೆದ್ದನು | |
| ಗೋಳಿಡು | ಗೋಳಿಟ್ಟನು | |
| ತರು | ತಂದನು | |
| ತಿನ್ನು | ತಿಂದನು | |
| ತೆರು | ತೆತ್ತನು | |
| ತೊಡು | ತೊಟ್ಟನು | |
| ತೊಯ್ಯು | ತೊಯ್ದನು | |
| ನಗು | ನಕ್ಕನು | |
| ನಿಲ್ಲು | ನಿಂತನು | |
| ನೂಲು | ನೂತನು | |

| ಧಾತು | ಪುಲ್ಲಿಂಗ ಏಕವಚನ | ನಪುಂಸಕ ಏಕವಚನ |
|---|---|---|
| ನೆಡು | ನೆಟ್ಟನು | |
| ನೆಯ್ಯು | ನೆಯ್ದನು | |
| ನೋ | ನೊಂದನು | |
| ಪಡು(ಮಲಗು; ಅನುಭವಿಸು) | ಪಟ್ಟನು | |
| ಬಿಡು | ಬಿಟ್ಟನು | |
| ಹೊಗು | ಹೊಕ್ಕನು | |
| ಪೊರಮಡು | ಪೊರಮಟ್ಟನು | |
| ಹೋಗು | ಹೋದನು | ಹೋಯಿತು |
| ಬಲಿ | ಬಲಿತನು | ಬಲಿಯಿತು,ಬಲಿತಿತು |
| ಬರು (ಬಾ) | ಬಂದನು | |
| ಬಚ್ಚಿಡು | ಬಚ್ಚಿಟ್ಟನು | |
| ಬಿಡು | ಬಿಟ್ಟನು | |
| ಬೀಳು | ಬಿದ್ದನು | |
| ಬೇಯು (ಬೇ) | ಬೆಂದನು | |
| ಮರೆ | ಮರೆತನು | |
| ಮಲೆ | ಮಲೆತನು | |
| ಮಿಗು-ಮಿಕ್ಕು | ಮಿಕ್ಕನು | |
| ಮೀಯು-ಮೀ | ಮಿಂದನು | |
| ಮೆಲ್ಲು | ಮೆಯ್ದನು | |
| ಮೊಳೆ | - | ಮೊಳೆತಿತು, ಮೊಳೆಯಿತು |
| ಸಲ್ಲು | ಸಂದನು | |
| (ಸಾಯು)ಸಾ | ಸತ್ತನು | |
| ಸಿಗು | ಸಿಕ್ಕಿದನು | ಸಿಕ್ಕಿತು |
| ಸೀನು | ಸೀತನು | |

| ಧಾತು | ಪುಲ್ಲಿಂಗ ಏಕವಚನ | ನಪುಂಸಕ ಏಕವಚನ |
|---|---|---|
| ಸುಡು | ಸುಟ್ಟನು | |
| ಸೋಲು | ಸೋತನು | |
| ಹುಳಿ | - | ಹುಳಿತಿತು<br>ಹುಳಿಯಿತು |
| ಹೆರು | ಹೆತ್ತಳು(ಸ್ತ್ರೀಲಿಂಗ) | |
| ಹೊರು | ಹೊತ್ತನು | |
| ಹೊರಡು | ಹೊರಟನು | |

'ಎಚ್ಚರು, ಬೇಸರು' ಎಂಬ ಧಾತುಗಳಿಗೆ ಭೂತಕಾಲದಲ್ಲಿ ಮಾತ್ರ ಪ್ರಯೋಗವಿದೆ. ಉದಾ- ಎಚ್ಚತ್ತನು, ಬೇಸತ್ತನು. ವರ್ತಮಾನ ಕಾಲಾದಿಗಳಲ್ಲಿ ಎಚ್ಚರಗೊಳ್ಳುತ್ತಾನೆ, ಬೇಸರಗೊಳ್ಳುತ್ತಾನೆ- ಇತ್ಯಾದಿ ರೂಪಗಳು ಬಳಕೆಯಲ್ಲಿವೆ.

### ೩. ಭವಿಷ್ಯದ್ರೂಪ

ಈ ರೂಪದ ಆಖ್ಯಾತ ಪ್ರತ್ಯಯಗಳು ಯಾವುವೆಂದರೆ :

| | ಪುಲ್ಲಿಂಗ | | ಸ್ತ್ರೀಲಿಂಗ | | ನ.ಲಿಂಗ | |
|---|---|---|---|---|---|---|
| | ಏ.ವ. | ಬ.ವ | ಏ.ವ. | ಬ.ವ | ಏ.ವ. | ಬ.ವ |
| ಪ್ರ.ಪು | ಅನು | ಅರು | ಅಳು | ಅರು | ಉದು<br>ಅದು | ಉವು<br>ಅವು |
| ಮ.ಪು | ಎ | ಎನು | (ಮೂರು ಲಿಂಗಗಳಲ್ಲಿ) | | | |
| ಉ.ಪು | ಎನು | ಎವು | | | | |

ಭವಿಷ್ಯದ್ರೂಪದಲ್ಲಿ ಧಾತುಗಳಿಗೆ 'ಉವ' ಎಂಬ ವಿಕರಣ ಪ್ರತ್ಯಯ ಬರುತ್ತದೆ. ಆಗ ಉಕಾರಾಂತ ಧಾತುವಿನ ಉಕಾರಕ್ಕೆ ಲೋಪ ಬರುತ್ತದೆ.

| ಉದಾ: | ಪುಲ್ಲಿಂಗ | ಸ್ತ್ರೀಲಿಂಗ | ನ.ಲಿಂಗ | |
|---|---|---|---|---|
| ಪ್ರ.ಪು. | ಕೇಳುವನು | ಕೇಳುವಳು | ಕೇಳುವುದು | ಕೇಳುವುವು |
| | ಕೇಳುವರು | ಕೇಳುವರು | ಕೇಳುವದು | ಕೇಳುವವು |

ಉಕಾರಾಂತವಲ್ಲದ ಧಾತುಗಳಿಗೆ 'ಉವ' ಬಂದಾಗ ನಡುವೆ ಯಕಾರಾಗಮ ಬರುತ್ತದೆ.

ಉದಾ: ನುಡಿಯುವನು, ಮೀಯುವನು, ಬೆಳೆಯುವುದು.

ಉತ್ತಮಪುರುಷದ ಏಕವಚನದಲ್ಲಿ 'ಎನು' ಪ್ರತ್ಯಯದ 'ನು' ಎಂಬುದಕ್ಕೆ ಲೋಪ ಮಾಡುವುದೂ ವಾಡಿಕೆಯಲ್ಲಿದೆ. ಉದಾ: ಕೇಳುವೆ, ನೋಡುವೆ.

## ೪. ಸಂಭಾವನಾರೂಪ

ಸಂಭಾವನಾರೂಪವು ಕ್ರಿಯೆ ನಡೆಯುವ ವಿಷಯವನ್ನು ಸಂದೇಹವನ್ನೂ ಊಹೆಯನ್ನೂ ಕೆಲವೆಡೆ ಸಾಮರ್ಥ್ಯವನ್ನೂ ತೋರಿಸುತ್ತದೆ. ಈ ರೂಪದ ಆಖ್ಯಾತ ಪ್ರತ್ಯಯಗಳು ಯಾವುವೆಂದರೆ :

| | | ಏ.ವ | ಬ.ವ |
|---|---|---|---|
| ಪ್ರ.ಪು | ಪು. | ಆನು | ಆರು |
| | ಸ್ತ್ರೀ. | ಆಳು | ಆರು |
| | ನ. | ಈತು | ಆವು |
| ಮ.ಪು. | | ಈಯೆ | ಈರಿ |
| ಉ.ಪು. | | ಏನು | ಏವು |

ಸಂಭಾವನಾರೂಪದಲ್ಲಿ ಆಖ್ಯಾತಪ್ರತ್ಯಯಗಳು ಸೇರುವಾಗ ಧಾತುಗಳು ವಿವಿಧ ರೂಪಗಳನ್ನು ಪಡೆದು ನಿಲ್ಲುತ್ತವೆ. ಎರಡು ಉದಾಹರಣೆಗಳನ್ನು ಗಮನಿಸಬಹುದು.

೧. ಮಾಡು

| | | ಏ.ವ. | ಬ.ವ |
|---|---|---|---|
| ಪ್ರ.ಪು | ಪು. | ಮಾಡಿಯಾನು | ಮಾಡಿಯಾರು |
| | ಸ್ತ್ರೀ. | ಮಾಡಿಯಾಳು | ಮಾಡಿಯಾರು |
| | ನ. | ಮಾಡೀತು | ಮಾಡಿಯಾವು |
| ಮ.ಪು | | ಮಾಡೀಯೆ | ಮಾಡೀರಿ |
| ಉ.ಪು. | | ಮಾಡಿಯೇನು | ಮಾಡಿಯೇವು |

೨. ನಗು

| | | ಏ.ವ | ಬ.ವ |
|---|---|---|---|
| ಪ್ರ.ಪು. | ಪು. | ನಕ್ಕಾನು | ನಕ್ಕಾರು |
| | ಸ್ತ್ರೀ | ನಕ್ಕಾಳು | ನಕ್ಕಾರು |
| | ನ. | ನಕ್ಕಾನು | ನಕ್ಕಾವು |

| | | |
|---|---|---|
| ಮ.ಪು. | ನಕ್ಕೀಯೆ | ನಕ್ಕೀರಿ |
| ಉ.ಪು | ನಕ್ಕೇನು | ನಕ್ಕೇವು |

೧. ಇದರ ರೂಪಸಿದ್ಧಿಗೆ ಒಂದು ಸಾಮಾನ್ಯ ನಿಯಮವನ್ನು ಹೇಳಬಹುದು. ಮುಂದೆ ಕೃದಂತ ಪ್ರಕರಣದಲ್ಲಿ 'ಭೂತಕೃದಂತಾವ್ಯಯ' ರೂಪವನ್ನು ತಿಳಿಸಲಾಗುವುದು. ಅದಕ್ಕೆ ಮೇಲ್ಕಂಡ ಆಖ್ಯಾತ ಪ್ರತ್ಯಯಗಳನ್ನು ಸೇರಿಸಿದರೆ ' ಸಂಭಾವನಾ ರೂಪ' ವಾಗುತ್ತದೆ.

| | ಧಾತು | ಭೂತಕೃದಂತಾವ್ಯಯ | ಸಂಭಾವನಾರೂಪ |
|---|---|---|---|
| ಉದಾ: | ತಿಳಿ | (ತಿಳಿದು) | ತಿಳಿದಾನು ತಿಳಿದಾಳು, ತಿಳಿದೀತು |
| | ನಡೆ | (ನಡೆದು) | ನಡೆದೀಯೆ, ನಡೆದೀರಿ, ನಡೆದಾವು |
| | ಬರು-ಬಾ | (ಬಂದು) | ಬಂದೇನು, ಬಂದೇವು, ಬಂದೀರಿ |
| | ಇಡು | (ಇಟ್ಟು) | ಇಟ್ಟಾನು, ಇಟ್ಟಾರು, ಇಟ್ಟೇವು |
| | ಬೀಳು | (ಬಿದ್ದು) | ಬಿದ್ದಾನು, ಬಿದ್ದೀರಿ, ಬಿದ್ದೇವು |
| | ನೋಡು | (ನೋಡಿ) | ನೋಡಿಯಾನು, ನೋಡಿಯಾಳು, ನೋಡೀತು. |

೨. ಆಗು- ಹೋಗು- ಈ ಧಾತುಗಳು ಕ್ರಮವಾಗಿ 'ಆದ, ಹೋದ' ಎಂಬ ರೂಪಗಳನ್ನು ತಳೆದು ಆಖ್ಯಾತಪ್ರತ್ಯಯಗಳನ್ನು ಪಡೆಯುತ್ತವೆ.

ಉದಾ: ಆದಾನು, ಆದಾಳು, ಆದೀತು, ಆದೀಯೆ, ಆದೇನು

ಹೋದಾನು, ಹೋದಾಳು, ಹೋದೀತು, ಹೋದೀಯೆ, ಹೋದೇನು.

## ೫.ವಿಧ್ಯಾದಿರೂಪ

ವಿಧಿಯೆಂದರೆ ಆಜ್ಞೆ, ಆಜ್ಞೆ, ಪ್ರಾರ್ಥನೆ, ಅನುಮತಿ, ಆಶೀರ್ವಾದ, ಶಾಪ, ಇಚ್ಛೆ, ಕರ್ತವ್ಯ- ಇವು ತೋರುವಾಗ ವಿಧ್ಯಾದಿರೂಪ ಬರುತ್ತದೆ. ಈ ರೂಪವಾಗುವುದು ಹೇಗೆಂದರೆ-

೧. ಪ್ರಥಮಪುರುಷದ ಎಲ್ಲ ಲಿಂಗವಚನಗಳಲ್ಲಿಯೂ 'ಅಲಿ' ಪ್ರತ್ಯಯ ಬರುತ್ತದೆ.

ಉದಾ: ಅವನು ಮಾಡಲಿ, ಅವಳು ಮಾಡಲಿ, ಅವರು ಮಾಡಲಿ, ಅದು ಮಾಡಲಿ, ಅವು ಮಾಡಲಿ.

(ಅ) ಶಾಪವು ತೋರುವಾಗ 'ಅಲಿ' ಪ್ರತ್ಯಯದ 'ಲಿ'ಗೆ ಲೋಪ ಬರುತ್ತದೆ.

ಉದಾ: ಹಾಳಾಗ, ಸುಟ್ಟುಹೋಗ.

೨. ಮಧ್ಯಮ ಪುರುಷದ ಏಕವಚನದಲ್ಲಿ 'ಇ' ಪ್ರತ್ಯಯವು ಬಂದು ಲೋಪವಾಗುತ್ತದೆ.

ಉದಾ: ನೀನು- ಮಾಡು, ಹೇಳು, ಇರು, ನುಡಿ.

(ಅ) ನೆಯ್ಯು, ಬಯ್ಯು, ಕೊಯ್ಯು- ಮುಂತಾದ 'ಯು' ಅಂತ್ಯದಲ್ಲಿರುವ 'ಇ' ಪ್ರತ್ಯಯಕ್ಕೆ ಲೋಪವಿಲ್ಲ.

ಉದಾ: ನೀನು- ನೆಯ್ಯಿ, ಬಯ್ಯಿ, ಕೊಯ್ಯಿ, ಸಾಯಿ.

(ಇ) ಮಧ್ಯಮಪುರುಷದ ಬಹುವಚನದಲ್ಲಿ 'ಇರಿ' ಪ್ರತ್ಯಯ ಬರುತ್ತವೆ.

ಉದಾ: ನೀವು ನುಡಿಯಿರಿ, ಬರೆಯಿರಿ.

೧. ಉಕಾರಾಂತ ಧಾತುವಿನ 'ಇರಿ' ಪ್ರತ್ಯಯದ 'ರಿ' ಎಂಬುದಕ್ಕೆ ವಿಕಲ್ಪವಾಗಿ ಲೋಪಬರುತ್ತದೆ.

ಉದಾ: ನೀವು- ಹೇಳಿರಿ, ಹೇಳಿ; ಕೇಳಿರಿ, ಕೇಳಿ.

೨. ತರು, ಬರು ಎಂಬ ಧಾತುಗಳ ಮಧ್ಯಮಪುರುಷ ಏಕವಚನದ ರೂಪ 'ತಾ,ಬಾ'. ಬಹುವಚನದ ರೂಪ 'ತನ್ನಿರಿ, ತನ್ನಿ; ಬನ್ನಿರಿ, ಬನ್ನಿ'.

೩. ಕೊಳ್ಳು ಧಾತುವಿನ ಮಧ್ಯಮಪುರುಷ ಏಕವಚನದ ರೂಪ ' ಕೊಳ್ಳು, ಕೊ'.

೪. ಭವಿಷ್ಯದ್ರೂಪದಂತೆ ಉತ್ತಮಪುರುಷದ ವಿಧ್ಯಾದಿರೂಪವಿರುತ್ತದೆ.

ಉದಾ: ಮಾಡುವೆನು, ಹೇಳುವೆವು, ಹೋಗುವೆನು, ತಿಳಿಯುವೆವು.

(ಅ) ಉತ್ತಮ ಪುರುಷದ ಬಹುವಚನದಲ್ಲಿ 'ಓಣ, ಉವ' ಪ್ರತ್ಯಯಗಳನ್ನು ಸೇರಿಸುವುದುಂಟು.

ಉದಾ: ನಾವು- ಮಾಡೋಣ; ಮಾಡುವ, ಕಲಿಯುವ.

೫. ಧಾತುವಿನ ಮೇಲೆ ಬೇಕು, ಬಹುದು, ಬಾರದು, ಕೂಡದು ಎಂಬ ಕ್ರಿಯಾರ್ಥಕ ಅವ್ಯಯಗಳನ್ನು ಬಳಸಿದರೂ ವಿಧ್ಯಾದಿರೂಪದ ಅರ್ಥವನ್ನು ಕೊಡುತ್ತವೆ. ಇವು ಪರವಾದಾಗ ನಡುವೆ 'ಅ' ಎಂಬ ವಿಕರಣವು ಬರುತ್ತದೆ. 'ಬಾರದು', 'ಕೂಡದು' ಎಂಬುದು ಕ್ರಿಯೆಯ ನಿಷೇಧವನ್ನು ಸೂಚಿಸುತ್ತದೆ. ಇವು ಎಲ್ಲ ಪುರುಷವಚನ, ಲಿಂಗಗಳಲ್ಲಿಯೂ ಬರುತ್ತವೆ.

ಉದಾ: ಅವನು
ಅವಳು
ಅವರು
ನಾನು
ಇತ್ಯಾದಿ | ಹೋಗಬೇಕು, ಮಾಡಬೇಕು, ನುಡಿಯಬೇಕು
ಹೋಗಬಾರದು, ಮಾಡಬಾರದು, ನುಡಿಯ ಕೂಡದು

(ಅ) ವಿಧಿಯ ನಿಷೇಧಾರ್ಥದಲ್ಲಿ ಮಧ್ಯಮ ಪುರುಷದ ಏಕವಚನದಲ್ಲಿ 'ಬೇಡ', ಬಹುವಚನದಲ್ಲಿ 'ಬೇಡಿರಿ, ಬೇಡಿ' ಎಂಬಿವು ಬರುತ್ತವೆ. ಧಾತುವಿಗೆ 'ಅ' ವಿಕರಣ ಹತ್ತುತ್ತದೆ.

ಉದಾ : ನೀನು- ಹೋಗಬೇಡ, ಬರಬೇಡ, ನುಡಿಯಬೇಡ
ನೀವು- ಹೋಗಬೇಡಿರಿ- ಹೋಗಬೇಡಿ;
ಬರಬೇಡಿರಿ- ಬರಬೇಡಿ;
ನುಡಿಯಬೇಡಿರಿ- ನುಡಿಯಬೇಡಿ

(ಆ) 'ಉದು' ಪ್ರತ್ಯಯಾಂತವಾದ ಭಾವಕೃದಂತವೂ ವಿಧ್ಯಾದಿರೂಪದ ಅರ್ಥವನ್ನು ಕೊಡುತ್ತದೆ. ಎಲ್ಲ ಪುರುಷ, ಲಿಂಗ, ವಚನಗಳಲ್ಲಿಯೂ ಒಂದೇ ರೂಪ.

ಉದಾ : ಮಾಡುವುದು, ಹೇಳುವುದು.

ಇದರ ಮೇಲೆ ನಿಷೇಧಾರ್ಥದಲ್ಲಿ 'ಬೇಡ' ಎಂಬುದು ಮಧ್ಯಮಪುರುಷ ಬಹುವಚನದಲ್ಲಿ 'ಬೇಡ, ಬೇಡಿರಿ, ಬೇಡಿ' ಎಂಬವೂ ಸೇರುತ್ತವೆ.

ಉದಾ :

ಅವನು
ನೀನು ಹೋಗುವುದು ಬೇಡ
ನಾನು
ನಾವು
ನೀವು- ಹೋಗುವುದು ಬೇಡ,- ಬೇಡಿರಿ,- ಬೇಡಿ.

## ೬. ನಿಷೇಧರೂಪ

ವಿಧಿಗೆ ಸಂಬಂಧಿಸಿದಂತೆ ಕ್ರಿಯಾನಿಷೇಧ ರೂಪಗಳನ್ನು ಹಿಂದೆ ತಿಳಿಸಿದೆ. ವಿಧಿ ಇಲ್ಲದಿದ್ದಾಗಲೂ ಕ್ರಿಯಾನಿಷೇಧದ ರೂಪಗಳುಂಟು. ಇದರ ಆಖ್ಯಾತಪ್ರತ್ಯಯಗಳು ಯಾವುವೆಂದರೆ-

| | | ಏ.ವ. | ಬ.ವ. |
|---|---|---|---|
| ಪ್ರ.ಪು. | ಪು. | ಅನು | ಅರು |
| | ಸ್ತ್ರೀ. | ಅಳು | ಅರು |
| | ನ. | ಅದು | ಅವು |
| ಮ.ಪು. | | ಎ | ಇರಿ |
| ಉ.ಪು. | | ಎನು | ಎವು |

ಉದಾ:

| | | | |
|---|---|---|---|
| ಪ್ರ.ಪು | ಪು. | ಮಾಡನು | ಮಾಡರು |
| | ಸ್ತ್ರೀ. | ಮಾಡಳು | ಮಾಡರು |
| | ನ. | ಮಾಡದು | ಮಾಡವು |
| ಮ.ಪು | | ಮಾಡೆ | ಮಾಡಿರಿ |
| ಉ.ಪು | | ಮಾಡೆನು | ಮಾಡೆವು |

(ಅ) ಉತ್ತಮಪುರುಷದ 'ಎನು' ಪ್ರತ್ಯಯದ 'ನು' ಎಂಬುದಕ್ಕೆ ಲೋಪವಾಗುವುದೂ ಉಂಟು.

ಉದಾ : ನಾನು-ಮಾಡೆ, ಹೋಗೆ, ಹೇಳೆ.

(ಆ) 'ತರು,ಬರು' ಎಂಬ ಧಾತುಗಳ ಆಕಾರಕ್ಕೆ ದೀರ್ಘ ಬರುತ್ತದೆ.

ಉದಾ: ತಾರನು, ತಾರಳು; ಬಾರನು, ಬಾರಳು.

ಹೀಗೆ **ಆಖ್ಯಾತಪ್ರತ್ಯಯವು ಬಂದಾಗ ನಿಷೇಧ ತೋರುವುದು ಕನ್ನಡ ಭಾಷೆಯ ಒಂದು ವೈಶಿಷ್ಟ್ಯ.**

೧. ಹೇಳುವುದು ಮುಂತಾದ ಭಾವಕೃದಂತದ ಮುಂದೆ 'ಇಲ್ಲ' ಎಂಬ ಅವ್ಯಯವನ್ನು ಸೇರಿಸಿದರೆ ನಿಷೇಧರೂಪವಾಗುತ್ತದೆ.

ಅವನು

ನೀನು

ನಾನು ಹೇಳುವುದಿಲ್ಲ, ಹೋಗುವುದಿಲ್ಲ, ಬರೆಯುವುದಿಲ್ಲ

ನಾವು

ಇತ್ಯಾದಿ

೨. ಧಾತುವಿಗೆ 'ಅಲ್' ಪ್ರತ್ಯಯವನ್ನು ಸೇರಿಸಿ 'ಇಲ್ಲ' ಎಂಬುದನ್ನು ಬಳಸಿದರೆ ಭೂತಕಾಲದ ಕ್ರಿಯೆಯ ನಿಷೇಧವಾಗುತ್ತದೆ.

ಉದಾ : ಮಾಡಲಿಲ್ಲ, ಹೇಳಲಿಲ್ಲ.

೩. 'ಆರು' ಎಂಬ ಧಾತು ಸಾಮರ್ಥ್ಯವನ್ನು ಸೂಚಿಸುತ್ತದೆ. ಇದರ ನಿಷೇಧಾರ್ಥದ ರೂಪವನ್ನು ಎಲ್ಲ ಧಾತುಗಳ ಮೇಲೂ ಸೇರಿಸಬಹುದು. ಆಗ ಧಾತುವಿಗೆ ' ಅಲ್' ಎಂಬ ಪ್ರತ್ಯಯ ಬರುತ್ತದೆ.

ಉದಾ: ಹೇಳಲಾರನು, ಮಾಡಲಾರಳು, ನುಡಿಯಲಾರದು.

ಹೇಳಲಾರೆ, ಹೇಳಲಾರಿರಿ, ನುಡಿಯಲಾರೆನು, ಕೇಳಲಾರೆವು.

## ವಿಶೇಷ ಧಾತುಗಳು

೧. 'ಇರು' ಎಂಬ ಧಾತುವಿಗೆ ಇರುತ್ತಾನೆ, ಇರುತ್ತಾಳೆ- ಮುಂತಾದ ರೂಪಗಳಲ್ಲದೆ ವರ್ತಮಾನ ಕಾಲದಲ್ಲಿ ಕೆಳಗೆ ಕಂಡ ರೂಪಗಳೂ ಇವೆ.

ಪ್ರ.ಪು. ಇದ್ದಾನೆ, ಇದ್ದಾಳೆ, ಇದ್ದಾರೆ, ಇದೆ, ಇವೆ.

ಮ.ಪು. ಇದ್ದೀಯೆ, ಇದ್ದೀರಿ

ಉ.ಪು. ಇದ್ದೇನೆ, ಇದ್ದೇವೆ.

(ಅ) ಮೇಲ್ಕಂಡ ರೂಪಗಳಲ್ಲಿ ಒತ್ತಕ್ಷರದ ದಕಾರವನ್ನು ಲೋಪಿಸುವುದೂ ಉಂಟು.

ಉದಾ : ಇದಾನೆ, ಇದೀಯೆ, ಇದೇನೆ.

(ಆ) ಇದ್ದಿತು ಎಂಬ ಭೂತರೂಪಕ್ಕೆ 'ಇತ್ತು' ಎಂಬ ರೂಪವೂ ಉಂಟು.

೨. ಅಂಗೀಕಾರಾರ್ಥದ ಒಲ್ ಧಾತುವಿಗೆ ನಿಷೇಧರೂಪ ಮಾತ್ರ ಉಂಟು.

ಉದಾ: ಒಲ್ಲನು, ಒಲ್ಲಳು, ಒಲ್ಲದು.

೩. ಜ್ಞಾನಾರ್ಥದ 'ಬಲ್' ಧಾತುವಿಗೆ ವರ್ತಮಾನಕಾಲದಲ್ಲಿ ಮಾತ್ರ ಪ್ರಯೋಗವಿದೆ. ಅದರ ರೂಪಗಳು ಹೀಗೆ-

ಪ್ರ.ಪು. ಬಲ್ಲನು, ಬಲ್ಲಳು, ಬಲ್ಲರು, ಬಲ್ಲದು; ಬಲ್ಲುದು, ಬಲ್ಲವು; ಬಲ್ಲುವು

ಮ.ಪು. ಬಲ್ಲೆ, ಬಲ್ಲಿರಿ

ಉ.ಪು. ಬಲ್ಲೆನು, ಬಲ್ಲೆ, ಬಲ್ಲೆವು.



## ಕೃದಂತ ಪ್ರಕರಣ

ಧಾತುವಿನ ಮೇಲೆ ಆಖ್ಯಾತ ಪ್ರತ್ಯಯಗಳಲ್ಲದೆ ಇನ್ನೊಂದು ಬಗೆಯ ಪ್ರತ್ಯಯಗಳು ಬರುತ್ತವೆ. ಇವುಗಳಿಗೆ ಕೃತ್ ಎಂದು ಹೆಸರು. ಕೃತ್ ಅಂತ್ಯದಲ್ಲಿ ಇರುವ ಶಬ್ದ ಕೃದಂತ. ಇವುಗಳಲ್ಲಿ ಕೃದಂತನಾಮ, ಕೃದಂತಭಾವನಾಮ, ಕೃದಂತಾವ್ಯಯ- ಎಂದು ಮೂರು ವಿಧ. ಮೊದಲನೆಯ ಎರಡು ಪ್ರಾತಿಪದಿಕಗಳೆನಿಸಿ ವಿಭಕ್ತಿ ಪ್ರತ್ಯಯಗಳನ್ನು ಪಡೆಯುತ್ತವೆ.

## ೧. ಕೃದಂತನಾಮ

ಕ್ರಿಯಾಪದಗಳಲ್ಲಿರುವಂತೆ ಕೃದಂತನಾಮಗಳಲ್ಲಿಯೂ ಕ್ರಿಯೆಗೆ ವರ್ತಮಾನ, ಭೂತ, ಭವಿಷ್ಯತ್ ಎಂಬ ಮೂರು ಕಾಲಗಳುಂಟು. ನಿಷೇಧ ರೂಪವೂ ಇದೆ. ಮೂರು ಲಿಂಗಗಳು ಎರಡು ವಚನಗಳೂ ಇವೆ, ಆದರೆ 'ಪುರುಷ'ವಿಲ್ಲ. ಕಾರಣಾರ್ಥದಲ್ಲಿ ಈ ಕೃತ್ ಪ್ರತ್ಯಯಗಳು ಬರುತ್ತವೆ. ಕರ್ತೃಕಾರಕದಲ್ಲಿ ಹೆಚ್ಚಾದ ಪ್ರಯೋಗವಿದೆ.

### ನಾಮ ಪ್ರತ್ಯಯಗಳು (ಕೃತ್)

| | ಏ.ವ. | ಬ.ವ. |
|---|---|---|
| ಪುಲ್ಲಿಂಗ | ಅವನು | ಅವರು |
| ಸ್ತ್ರೀಲಿಂಗ | ಅವಳು | ಅವರು |
| ನಪುಂಸಕಲಿಂಗ | ಉದು | ಉವು |

(ಅ) ವರ್ತಮಾನಕಾಲದಲ್ಲಿ ಧಾತುವಿಗೆ ಈ ಕೃತ್ ಪ್ರತ್ಯಯಗಳು ಸೇರುವಾಗ ನಡುವೆ **ಅತಕ್ಕ** ಎಂಬ ವಿಕರಣ ಬರುತ್ತದೆ. ಆಗ ಸಂಧಿನಿಯಮದಂತೆ ಧಾತುವಿನ ಉಕಾರಕ್ಕೆ ಲೋಪವೂ ಇತರ ಸ್ವರದ ಮುಂದೆ ಯಕಾರಾಗಮವೂ ಬರುತ್ತದೆ.

ಉದಾ: ಮಾಡತಕ್ಕವನು, ಮಾಡತಕ್ಕವಳು, ಮಾಡತಕ್ಕುದು, ಮಾಡತಕ್ಕವರು, ಮಾಡತಕ್ಕುವು.

(ಆ) ಭೂತ- ಭವಿಷ್ಯತ್ ಕಾಲಗಳಲ್ಲಿ ಆಖ್ಯಾತಪ್ರತ್ಯಯಗಳು ಸೇರುವಾಗ ಧಾತುವಿಗೆ ಯಾವ ರೂಪಾಂತರವಿದೆಯೋ ಯಾವ ವಿಕರಣವಿದೆಯೋ ಅದೆಲ್ಲವೂ ಕೃತ್ ಪ್ರತ್ಯಯಗಳು ಪರವಾದಾಗಲೂ ಬರುತ್ತದೆ.

ಉದಾ: ಭೂತಕಾಲಕ್ಕೆ- ಮಾಡಿದವನು, ಮಾಡಿದವಳು, ಮಾಡಿದುದು
ಕೊಟ್ಟವನು, ಕೊಟ್ಟವಳು, ಕೊಟ್ಟುದು
ಇತ್ತವನು, ಇತ್ತವಳು, ಇತ್ತುದು

**ಭವಿಷ್ಯತ್ಕಾಲಕ್ಕೆ-**

ಮಾಡುವವನು, ಮಾಡುವವಳು, ಮಾಡುವುದು, ಮಾಡುವದು
ಕೊಡುವವನು, ಕೊಡುವವಳು, ಕೊಡುವುದು, ಕೊಡುವದು
ಈಯುವವನು, ಈಯುವವಳು, ಈಯುವುದು, ಈಯುವದು

(ಇ) ನಿಷೇಧರೂಪದಲ್ಲಿ ಕೃತ್ ಪ್ರತ್ಯಯಗಳು ಸೇರುವಾಗ ಧಾತುವಿನ ಮುಂದೆ **ಅದ** ಎಂಬ ವಿಕರಣಪ್ರತ್ಯಯ ಬರುತ್ತದೆ.

ಉದಾ : ಮಾಡದವನು, ನುಡಿಯದವನು, ನಗದವನು, ಹೇಳದವಳು, ಬೀಳದುದು.

ವಿಶೇಷ: ೧. ಭೂತಕಾಲದಲ್ಲಿ ಮಾಡಿದ್ದವನು, ಮಾಡಿದ್ದವಳು, ಮಾಡಿದ್ದುದು- ಇತ್ಯಾದಿ ಪ್ರಯೋಗಗಳಿವೆ. ಇಲ್ಲಿ ಮಾಡಿ + ಇದ್ದವನು ಎಂದು ಪದಚ್ಛೇದ. **ಮಾಡಿ** ಎಂಬುದು ಕೃದಂತಾವ್ಯಯ. ಇರು ಧಾತುವಿನ ಭೂತಕೃದಂತ ರೂಪ **ಇದ್ದವನು. ಮಾಡಿದ್ದುದು** ಎಂಬಲ್ಲಿ ದು ಶಬ್ದಕ್ಕೆ ಲೋಪವನ್ನು ಮಾಡಿ **ಮಾಡಿದ್ದು** ಎಂದು ಪ್ರಯೋಗಿಸುವುದೂ ಉಂಟು. ಇದ್ದುದು ಎಂಬುದನ್ನು **ಇದ್ದದ್ದು** ಎಂದೂ ಕೆಲವರು ಬಳಸುತ್ತಾರೆ.

೨. ಕರ್ಮಣಿ ಪ್ರಯೋಗದಲ್ಲಿಯೂ ಮೇಲ್ಕಂಡ ಕೃತ್ ಪ್ರತ್ಯಯಗಳು ಬರುತ್ತವೆ.

ಉದಾ : ಹೇಳಲ್ಪಡತಕ್ಕವನು, ಹೇಳಲ್ಪಟ್ಟವನು, ಹೇಳಲ್ಪಡುವವನು, ಹೇಳಲ್ಪಡದವನು.

೩. ಮೇಲ್ಕಂಡ ಕೃದಂತನಾಮಗಳಲ್ಲಿ 'ಅವನು, ಅವಳು' ಮುಂತಾದ ಪ್ರತ್ಯಯಗಳನ್ನು ಸೇರಿಸದಿದ್ದಾಗ ಬರಿಯ ವಿಶೇಷಣಗಳಾಗುತ್ತವೆ. ಅವುಗಳ ಮೇಲೆ ವಿಭಕ್ತಿ ಪ್ರತ್ಯಯಗಳು ಬರುವುದಿಲ್ಲ. ಅವನ್ನು ಕೃದಂತ ವಿಶೇಷಣಗಳೆನ್ನಬಹುದು.

ಉದಾ : ಕೇಳತಕ್ಕ ಮನುಷ್ಯ, ನಕ್ಕ ಹುಡುಗ, ಹಾಡುವ ಹುಡುಗಿ, ಬಿದ್ದ ಹಣ್ಣು.

೪. ಕೃದಂತವಿಶೇಷಣಗಳಾಗುವಾಗ ಧಾತುಗಳಿಗೆ ಕರ್ಮಾರ್ಥದಲ್ಲಿ **ಅಲ್ಪಡು** ಎಂಬುದು ವಿಕಲ್ಪವಾಗಿ ಬರುತ್ತದೆ.

ಉದಾ: ಹಾಡುವ (ಹಾಡಲ್ಪಡುವ) ಪದ ಕೇಳುವ (ಕೇಳಲ್ಪಡುವ) ಕಥೆ
ಮುರಿದ (ಮುರಿಯಲ್ಪಟ್ಟ)ಕೋಲು ಸುಟ್ಟ (ಸುಡಲ್ಪಟ್ಟ) ಕಾಡು
ತಿನ್ನುವ (ತಿನ್ನಲ್ಪಡುವ) ಪದಾರ್ಥ ಕಟ್ಟಿದ (ಕಟ್ಟಲ್ಪಟ್ಟ) ಮನೆ
ನೋಡದ (ನೋಡಲ್ಪಡದ)ಮನುಷ್ಯ ಬಿಟ್ಟ(ಬಿಡಲ್ಪಟ್ಟ) ಶಾಲೆ.

೫. ತಿರುಕ, ಕುಡುಕ, ಹರುಕ, ಕಳ್ಳ, ಮನೆಮುರುಕ, ಬಾಯಿಬಡುಕ, ಬಾಲಬಡಕ, ಹೊಟ್ಟೆಹೊರಕ, ಬಾಳುಹರಕ - ಮೊದಲಾದವೂ ಕೃದಂತನಾಮಗಳು. ತಿರಿಯುವವನು= ತಿರುಕ. ಕುಡಿಯುವವನು= ಕುಡುಕ ಇತ್ಯಾದಿ.

## ೨. ಕೃದಂತಭಾವನಾಮ

ಭಾವವೆಂದರೆ ಕ್ರಿಯೆ. ಎಲ್ಲ ಧಾತುಗಳ ಮೇಲೂ ಭಾವಾರ್ಥದಲ್ಲಿ ಉವುದು, **ಉವದು, ಉವಿಕೆ** ಎಂಬ ಪ್ರತ್ಯಯಗಳು ಬರುತ್ತವೆ. ಇವು ಬಂದಾಗ ಧಾತುವಿನ ಅಂತ್ಯದಲ್ಲಿರುವ ಉಕಾರಕ್ಕೆ ಲೋಪ ಬರುತ್ತದೆ. ಉಳಿದೆಡೆ ಧಾತುವಿನ ಮುಂದೆ ಯಕಾರಾಗಮ ಬರುತ್ತದೆ.

ಉದಾ : ಮಾಡುವುದು, ಮಾಡುವದು, ಮಾಡುವಿಕೆ;

ಹೇಳುವುದು, ಹೇಳುವದು, ಹೇಳುವಿಕೆ;

ಕಲಿಯುವುದು, ಕಲಿಯುವಿಕೆ; ಬರೆಯುವುದು, ಬರೆಯುವಿಕೆ

**ವುದು** ಪ್ರತ್ಯಯವೂ ಕಂಡುಬರುತ್ತದೆ- ಕಲಿವುದು, ಬರೆವುದು.

೧. **ಉವುದು** ಪ್ರತ್ಯಯವು ವಿಧಿ, ಪ್ರಾರ್ಥನೆ ಮುಂತಾದ ಅರ್ಥದಲ್ಲಿಯೂ ಬರುತ್ತದೆ.

ಉದಾ : ನೀವು- ತಿಳಿಯುವುದು, ಕೊಡುವುದು.

೨. ಕೆಲವರು **ವಿಕೆ, ವುದು, ಓಣ** ಪ್ರತ್ಯಯಗಳನ್ನು ಭಾವಾರ್ಥದಲ್ಲಿ ಸೇರಿಸುತ್ತಾರೆ.

ಉದಾ: ಕಲಿವಿಕೆ, ಉರಿವಿಕೆ, ಕಲಿವುದು, ಬರೆವುದು, ಕಲಿಯೋಣ, ಬರೆಯೋಣ.

೩. ಕೆಲವು ಧಾತುಗಳು ಧಾತು ಸ್ವರೂಪದಲ್ಲಿಯೇ ನಿಂತು ಕೃದಂತಭಾವ ನಾಮಗಳೆನಿಸುತ್ತವೆ.

ಉದಾ : ಹುಟ್ಟು, ನಡೆ, ನುಡಿ,ಓದು, ತಪ್ಪು, ಬೆಳೆ, ಕಟ್ಟು, ಗುದ್ದು, ಬೀಳು, ಬದುಕು, ಉರಿ, ಚಿಗುರು, ಉಗುಳು, ಹೇರು, ಹಿಡಿ, ಸವಿ.

ಧಾತುಸ್ವರೂಪದಲ್ಲಿ ನಿಂತಾಗ ಕೆಲವು ಧಾತುಗಳ ಆದಿಸ್ವರವು ದೀರ್ಘವಾಗುತ್ತದೆ.

ಉದಾ : ಕೆಡು= ಕೇಡು, ಬಿಡು= ಬೀಡು, ಪಡು= ಪಾಡು.

೪. ಭಾವಾರ್ಥದಲ್ಲಿ ಇನ್ನು ಕೆಲವು ಪ್ರತ್ಯಯಗಳೂ ಬರುತ್ತವೆ -

ಇಕೆ- ಬಾಳಿಕೆ, ನಂಬಿಕೆ, ಹೊಗಳಿಕೆ, ಹೋಲಿಕೆ, ಎಚ್ಚರಿಕೆ, ಆಳಿಕೆ, ಅಂಜಿಕೆ, ನಾಚಿಕೆ, ಬಳಲಿಕೆ, ಬೆದರಿಕೆ, ಕಲಿಕೆ.

ಇಗೆ-ಉಡಿಗೆ, ತೊಡಿಗೆ, ಅಡಿಗೆ, ಹೆರಿಗೆ, ಮುತ್ತಿಗೆ, ಹಾಸಿಗೆ.

ಅವು- ಕಳವು, ಬರವು, ಸೆಳವು, ಗೆಲವು, ನಿಲವು, ಒಲವು, ತೆರವು.

ವು- ಸಾವು, ನೋವು, ಮೇವು, ಸುಳಿವು, ದಣಿವು, ಅರಿವು,ಹರಿವು, ಅಳಿವು.

ತ - ಕುಣಿತ, ತಿವಿತ, ಇರಿತ, ಒಗೆತ, ನೆಗೆತ, ಮೆರೆತ, ಅಗಿತ, ಬಿಗಿತ.

ವಳಿ- ನಡೆವಳಿ, ಸಲುವಳಿ, ಕೊಡುವಳಿ, ತರುವಳಿ, ಹಿಡಿವಳಿ (ಹಿಡುವಳಿ)

ಟ- ಆಟ, ಓಟ, ನೋಟ, ಮಾಟ, ಕಾಟ, ಊಟ.

ಅಲು- ಮುಗ್ಗಲು, ಬಿಕ್ಕಲು, ಒಣಗಲು, ಜಾರಲು, ಒಕ್ಕಲು

ಎ- ನಗೆ, ಹೊರೆ, ಕೊಲೆ.

ಅತೆ- ಅಳತೆ, ನಡತೆ

ಅಪು- ನೆನಪು, ಹೊಳಪು.

ಅ- ಸಾಲ, ಸೋಲ

ಅಕೆ- ಮೊಳಕೆ, ಬೆರಕೆ

ವಳಿಕೆ- ಬೆಳೆವಳಿಕೆ, ತಿಳಿವಳಿಕೆ.

ವಣಿಗೆ- ಮೆರವಣಿಗೆ, ಬರೆವಣಿಗೆ, ಬೆಳವಣಿಗೆ.

ಇತ- ಒಪ್ಪಿತ, ತಪ್ಪಿತ.

ಗೆ- ಬೇಗೆ, ನಂಬುಗೆ, ಉಡುಗೆ, ತೊಡುಗೆ.

ಅಣೆ- ಒಕ್ಕಣೆ, ಹರಗಣೆ.

ಇಸು- ಮುಳಿಸು, ತಿನಿಸು.

ಅಕು - ಮುರಕು, ಹರಕು.

ಉಕ - ನಡುಕ, ಮುರುಕ.

ಕೆ - ಆಯ್ಕೆ, ಆರಯ್ಕೆ

ಅಸು- ಬೆಳಸು, ನೆನಸು.

೫. ಹಳಗನ್ನಡದ ಕೆಲವು ಕೃದಂತಭಾವನಾಮಗಳು ಹೊಸಗನ್ನಡದಲ್ಲಿ ಸ್ವಲ್ಪ ರೂಪಾಂತರವನ್ನು ಹೊಂದುತ್ತವೆ.

ಉದಾ : ಏಳ್ಗೆ = ಏಳಿಗೆ, ಸಲ್ಗೆ= ಸಲಿಗೆ, ಕಾಣ್ಕೆ= ಕಾಣಿಕೆ, ಒಲ್ಮೆ= ಒಲುಮೆ, ಬಲ್ಮೆ= ಬಲುಮೆ, ಬಾಳ್ವೆ= ಬಾಳುವೆ.

ಯಾವ ಧಾತುಗಳ ಮೇಲೆ ಯಾವ ಯಾವ ಪ್ರತ್ಯಯಗಳು ಬರುತ್ತವೆಯೆಂಬುದನ್ನು ರೂಢಿಯಿಂದ ತಿಳಿಯಬೇಕು. ರೂಢಿಯಿಂದ ಇವುಗಳಿಗೆ ಅರ್ಥವಿಶೇಷವೂ ಸಂಭವಿಸುತ್ತವೆ.

ಉದಾ : ಹೇರುವಿಕೆ = ಹೇರು, ಹಿಡಿಯುವಿಕೆ= ಹಿಡಿವಳಿ, ಹಾಸುವಿಕೆ= ಹಾಸಿಗೆ.

೬. ಭೂತಕಾಲದಲ್ಲಿಯೂ ಕೆಲವು ಭಾವಾರ್ಥಕ ಕೃತ್ ಪ್ರತ್ಯಯಗಳು ಬರುತ್ತವೆ.

ಉದಾ: ಮಾಡಿದ್ದು, ಮಾಡಿದುದು; ಕೇಳಿದ್ದು, ಕೇಳಿದುದು; ಬಿದ್ದಿದ್ದು, ಬಿದ್ದದ್ದು, ಬಿದ್ದುದು; ಕೆತ್ತಿದ್ದು, ಕಿತ್ತದ್ದು, ಕಿತ್ತದು; ಆದದ್ದು, ಆಗಿದ್ದು, ಆದುದು; ಹೋಗಿದ್ದು, ಹೋದದ್ದು, ಹೋದುದು.

## ೩. ಕೃದಂತಾವ್ಯಯಗಳು

ಧಾತುವಿನ ಮೇಲೆ **ಉತ್ತದು, ಅದೆ, ಅಲು, ದರೆ, ಅ**, - ಇತ್ಯಾದಿ ಪ್ರತ್ಯಯಗಳು ಬಂದು ಕೃದಂತಾವ್ಯಯಗಳಾಗುತ್ತವೆ. ಇವೆಲ್ಲವೂ ಪೂರ್ಣಕ್ರಿಯೆಯನ್ನು ಕೊಡುವ ಕ್ರಿಯಾಪದದಲ್ಲಿ ವಿಶೇಷಣವಾಗಿ ಅನ್ವಯವನ್ನು ಪಡೆಯುತ್ತವೆ.

### ಭೂತಕೃದಂತಾವ್ಯಯ

೧. ಒಂದೇ ಕರ್ತೃವಿನಿಂದ ಅನೇಕ ಕ್ರಿಯೆಗಳುಂಟಾದಾಗ ನಡೆದುಹೋದ ಪೂರ್ವಕ್ರಿಯೆಯನ್ನು ಹೇಳುವ ಧಾತುವಿನ ಮೇಲೆ **ದು** ಪ್ರತ್ಯಯ ಬರುತ್ತದೆ.

ಉದಾ : ಅವನು **ಬರೆದು** ಕಳಿಸಿದನು.

ಹುಡುಗನು ಚೆಂಡನ್ನು **ಎಸೆದು** ಬಂದನು.

(ಅ) ಉಕಾರಾಂತ ಧಾತುವಿನ ಮೇಲೆ **ದುಗೆ** ಬದಲಾಗಿ **ಇ** ಪ್ರತ್ಯಯ ಬರುತ್ತದೆ.

ಉದಾ: ಅವನು ನೋಡಿ ಬಂದನು. ಕೇಳಿ ಕಳಿಸಿದನು, ಕಳಿಸಿ ಬರುತ್ತಾನೆ.

(ಆ) ಭೂತಕಾಲದ ಕ್ರಿಯಾಪದಗಳಾಗುವಾಗ ಧಾತುಗಳಿಗೆ ಯಾವ ಆದೇಶಗಳು ಬರುತ್ತವೆಯೋ, ಅಂಥ ಆದೇಶಗಳು ಪೂರ್ವಕ್ರಿಯೆಯನ್ನು ಹೇಳುವ ಧಾತುಗಳಿಗೂ ಬರುತ್ತವೆ. ಅವುಗಳಿಗೆ **ದುಗೆ** ಬದಲಾಗಿ **ಉ** ಪ್ರತ್ಯಯ ಬರುತ್ತದೆ.

ಉದಾ :

| ಧಾತು | ಭೂತಕಾಲದ ಕ್ರಿಯಾಪದ | ಕೃದಂತಾವ್ಯಯ |
|---|---|---|
| ಏಳು | ಎದ್ದನು | ಎದ್ದು |
| ಕಾಣು | ಕಂಡನು | ಕಂಡು |
| ನಿಲ್ಲು | ನಿಂತನು | ನಿಂತು |
| ಕೊಡು | ಕೊಟ್ಟನು | ಕೊಟ್ಟು |

ಆದರೆ ಒಂದು ದೀರ್ಘವಿದ್ದು ಉಕಾರಾಂತವಾದ ಧಾತುಗಳು ಈ ನಿಯಮಕ್ಕೆ ಒಳಗಾಗದೆ ಇ ಪ್ರತ್ಯಯವನ್ನು ಪಡೆಯುತ್ತವೆ.

ಆಗು-ಆಗಿ, ಹೋಗು- ಹೋಗಿ, ಹೀಗೆಯೇ ಮಾಡಿ, ಬೇಡಿ, ಕಾಡಿ, ನೋಡಿ, ಬೀಗಿ ಇತ್ಯಾದಿ.

(ಇ) ಈ ಧಾತುಗಳಿಗೆ ಎರಡೆರಡು ರೂಪಗಳುಂಟು.

ಸಿಗು-ಸಿಕ್ಕಿ,ಸಿಕ್ಕು; ಮಿಗು- ಮಿಕ್ಕಿ, ಮಿಕ್ಕು; ಒಗು- ಒಕ್ಕಿ, ಒಕ್ಕು; ಉಗು (ಉಕ್ಕು)- ಉಕ್ಕಿ, ಉಕ್ಕು.

**ವಿಶೇಷ :** ಕಾರ್ಯಕಾರಣಭಾವ ತೋರುವಾಗ- ಎಂದರೆ ಮೊದಲನೆಯ ಕ್ರಿಯೆ ಎರಡನೆಯ ಕ್ರಿಯೆಗೆ ಕಾರಣವಾದಾಗ ಒಂದೇ ಕರ್ತೃವಿರಬೇಕೆಂಬ ನಿಯಮವಿಲ್ಲ.

ಉದಾ: ಮಳೆ ಬಿದ್ದು ಕೆರೆ ತುಂಬಿತು

ಗುರು ಕಲಿಸಿ ಶಿಷ್ಯನು ಬುದ್ಧಿವಂತನಾದನು

ಕಾಲು ಜಾರಿ ಅವನು ಬಿದ್ದನು

ಇವುಗಳಿಗೆ **ಭೂತಕೃದಾಂತಾವ್ಯಯ**ಗಳೆಂದು ಹೆಸರು. ಇವು ಇಕಾರಾಂತ ಅಥವಾ ಉಕಾರಾಂತವಾಗಿರುತ್ತವೆ.

೨. ಒಂದೇ ಕರ್ತೃವಿನಿಂದ ಎರಡು ಕ್ರಿಯೆಗಳು ಏಕಕಾಲದಲ್ಲಿ ನಡೆಯುವಾಗ, ವಿವಕ್ಷಾನುಸಾರವಾಗಿ ಒಂದು ಧಾತುವಿನ ಮೇಲೆ **ಉತ್ತ** ಎಂಬ ಪ್ರತ್ಯಯ ಬರುತ್ತದೆ. ಇದು ಕಾಲತ್ರಯವನ್ನು ಸೂಚಿಸಬಹುದು.

ಉದಾ : ವರ್ತಮಾನ- ಹಾಡುತ್ತ ಹೋಗುತ್ತಾನೆ, ಹೋಗುತ್ತ ಹಾಡುತ್ತಾನೆ.

ಭೂತ - ಹೇಳುತ್ತ ಬರೆದನು. ಬರೆಯುತ್ತ ಹೇಳಿದನು.

ಭವಿಷ್ಯತ್- ನೋಡುತ್ತ ಹಾಡುವೆನು. ಹಾಡುತ್ತ ನೋಡುವೆನು.

**ವಿಶೇಷ** (ಅ) ಉತ್ತ ಪ್ರತ್ಯಯದ ಮೇಲೆ ಇರು ಧಾತುವಿನಿಂದಾದ ಕೃದಂತಾವ್ಯಯವು ಸೇರಬಹುದು. ಆಗ ಒಂದೇ ಕರ್ತೃವಿರಬೇಕೆಂಬ ನಿಯಮವಿಲ್ಲ.

ಉದಾ : ಅವನು ಮಾತಾಡುತ್ತಿರಲು, ಗಂಟಲು ಒಣಗಿತು.

ಹನುಮಂತನು ಹೇಳುತ್ತಿರಲು, ರಾವಣನು ಸಿಡುಕಿದನು.

ಹೀಗೆಯೆ 'ಇರಲಾಗಿ, ಇದ್ದಿರಲಾಗಿ, ಇದ್ದಿರಲು, ಇದ್ದಾಗ' ಎಂಬಿವನ್ನು ಉತ್ತ ಪ್ರತ್ಯಯಾಂತದ ಮೇಲೆ ಸೇರಿಸಬಹುದು.

(ಆ) ಪೂರ್ವಕ್ರಿಯೆ ಆಗತಾನೆ ಮುಗಿಯಿತೆಂಬ ಅರ್ಥ ತೋರಿದಾಗ, ಆ

ಧಾತುವಿನ ಮೇಲೆ **ಉತ್ತಲೂ, ಉತ್ತಲೆ** ಎಂಬ ಪ್ರತ್ಯಯಗಳು ಸೇರುತ್ತವೆ.

ಉದಾ : ನಾನು ಹೋಗುತ್ತಲೂ ಅವನನ್ನು ಕಂಡೆನು.

ಅವನು ಕೇಳುತ್ತಲೆ ನಾನು ಕೊಟ್ಟೆನು.

ನಾನು ಹೋಗುವುದೂ ಅವನನ್ನು ಕಂಡೆನು- ಇತ್ಯಾದಿ ಪ್ರಯೋಗಗಳೂ ಕಂಡು ಬರುತ್ತವೆ.

೭. ಒಂದೇ ಕರ್ತೃವಿನಿಂದ ಎರಡು ಕ್ರಿಯೆಗಳು ನಡೆಯುವಾಗ ಭವಿಷ್ಯತ್ ಕಾಲದ ಕ್ರಿಯೆಯನ್ನು ಹೇಳುವ ಧಾತುವಿನ ಮೇಲೆ **ಅಲು** ಎಂಬ ಪ್ರತ್ಯಯ ಬರುತ್ತದೆ. ಈ ಭವಿಷ್ಯತ್ಕಾಲದ ಕ್ರಿಯೆ ಇನ್ನೊಂದು ಕ್ರಿಯೆಗೆ ಪ್ರಯೋಜನವಾಗಿರುತ್ತದೆ.

ಉದಾ : ಓದಲು ಶಾಲೆಗೆ ಹೋದೆನು

ತಿನ್ನಲು ಮನೆಗೆ ಬರುತ್ತಾನೆ.

**ವಿಶೇಷ:** (ಅ) ಈ ಅಲುವಿನ ಮುಂದೆ **ಇಕ್ಕೆ** ಎಂಬ ಪ್ರತ್ಯಯವನ್ನು ಸೇರಿಸುವುದುಂಟು.

ಉದಾ : ಓದಲಿಕ್ಕೆ, ತಿನ್ನಲಿಕ್ಕೆ

(ಆ) **ಅಲು** ಪ್ರತ್ಯಯದ **ಲುಗೆ** ಲೋಪಮಾಡಬಹುದು. ಆಗ ಇನ್ನೊಂದು ಕ್ರಿಯಾಪದದ ಹಿಂದೆಯೇ ಪ್ರಯೋಗಿಸಬೇಕು.

ಉದಾ : ಓದ ಹೋದನು. ತಿನ್ನ ಬಂದನು. ಹೋಗ ಹೇಳಿದನು.

(ಇ) ಕ್ರಿಯೆಗಳಿಗೆ ಕಾರ್ಯಕಾರಣಭಾವ ತೋರಿದಾಗ ಕಾರಣ ಕ್ರಿಯಾವಾಚಕದ ಮೇಲೆ **ಅಲು** ಬರುತ್ತದೆ. ಅದರ ಮುಂದೆ **ಆಗಿ** ವಿಕಲ್ಪವಾಗಿ ಬರುತ್ತದೆ. ಇಲ್ಲಿ ಒಂದೇ ಕರ್ತೃವಿರಬೇಕೆಂಬ ನಿಯಮವಿಲ್ಲ.

ಉದಾ : ನಾನು ಹೋಗಲು ಆತನಿಗೆ ಸಂತೋಷವಾಯಿತು. ಮಗು ಬರಲಾಗಿ ತಾಯಿ ಹಿಗ್ಗಿದಳು.

೮. ಒಂದೇ ಕರ್ತೃವಿನಿಂದ ಎರಡು ಕ್ರಿಯೆಗಳು ನಡೆಯುವಾಗ ಪೂರ್ವ ಕ್ರಿಯೆಯಲ್ಲಿ ನಿಷೇಧ ತೋರಿದರೆ, ಆ ಧಾತುವಿನ ಮೇಲೆ **ಅದೆ** ಪ್ರತ್ಯಯ ಬರುತ್ತದೆ.

ಉದಾ : ಅವನು ತಿಳಿಸದೆ ಹೋಗುತ್ತಾನೆ

ಅವಳು ಹಾಡದೆ ಬಂದಳು.

**ವಿಶೇಷ** : (ಅ) ಎರಡು ಕ್ರಿಯೆಗಳಿಗೆ ಕಾರ್ಯಕಾರಣಭಾವ ತೋರಿದಾಗ ಒಂದೇ ಕರ್ತೃವಿರಬೇಕೆಂಬ ನಿಯಮವಿಲ್ಲ.

ಉದಾ : ನಾನು ಹೇಳದೆ ಮೋಸವಾಯಿತು.

ನೀನು ಹೋಗದೆ ಕೆಲಸವಾಗದು.

ಅವನು ಅಡ್ಡಿ ಪಡಿಸದೆ ಇವನು ಬಂದನು.

(ಆ) ಹೀಗೆ ಕಾರ್ಯಕಾರಣಭಾವ ತೋರಿದಾಗ ಅದೆ ಪ್ರತ್ಯಯದ ಮುಂದೆ **ಇರು** ಧಾತುವೂ ಅದರ ಮುಂದೆ **ಅಲು, ಅಲಾಗಿ,** ಎಂಬುದೂ ಸೇರಬಹುದು.

ಉದಾ : ನಾನು ಹೇಳದಿರಲು (ಹೇಳದಿರಲಾಗಿ) ಮೋಸವಾಯಿತು.

೫. ಎರಡು ಕ್ರಿಯೆಗಳು ನಡೆಯುವಾಗ ಕಾರಣವಾದ ಕ್ರಿಯೆಯಲ್ಲಿ ಸಂಭಾವನೆ (ಷರತ್ತು) ತೋರಿದಾಗ, ಆ ಧಾತುವಿನ ಮೇಲೆ **ದರೆ** ಅಥವಾ **ಅರೆ** ಪ್ರತ್ಯಯ ಬರುತ್ತದೆ.

ಉದಾ : ನಾನು ಹೇಳಿದರೆ ಅದರಂತೆ ನಡೆಯುತ್ತೇನೆ.

ಅವನು ಕೊಟ್ಟರೆ ನೀನು ಕೊಡುತ್ತೀಯೆ.

ಈ ರೂಪಗಳನ್ನು ಸಿದ್ಧಪಡಿಸುವುದು ಹೇಗೆಂದರೆ-

(ಅ) ಇಕಾರಾಂತ ಭೂತಕೃದಂತಗಳ ಮೇಲೆ **ದರೆ** ಪ್ರತ್ಯಯವನ್ನು ಸೇರಿಸಬೇಕು.

ಉದಾ: ಹೇಳಿದರೆ, ನೋಡಿದರೆ, ಬರೆದರೆ, ಹೇಳಿಸಿದರೆ,

(ಆ) ಉಕಾರಾಂತ ಭೂತಕೃದಂತಗಳ ಮೇಲೆ **ಅರೆ** ಪ್ರತ್ಯಯವನ್ನು ಸೇರಿಸಬೇಕು.

ಉದಾ : ನಿಂತರೆ, ಕೊಟ್ಟರೆ, ಸುಟ್ಟರೆ, ಕಂಡರೆ.

(ಇ) ಆಗು ಧಾತುವಿನ ರೂಪ ಆದರೆ. ಹೋಗು ಧಾತುವಿನ ರೂಪ ಹೋದರೆ.

**ವಿಶೇಷ**: ಮೇಲ್ಕಂಡ ಉದಾಹರಣೆಗಳಲ್ಲಿ ಕಾರಣಕ್ರಿಯೆ ಭವಿಷ್ಯತ್ಕಾಲಕ್ಕೆ ಸಂಬಂಧಿಸಿದೆ. ಅದು ಭೂತಕಾಲಕ್ಕೆ ಸಂಬಂಧಿಸಿದರೆ ಧಾತುವಿನ ಮೇಲೆ ಇದ್ದರೆ ಎಂಬ ಪ್ರತ್ಯಯವು ಬರುತ್ತದೆ. ಅದನ್ನು ಎಲ್ಲ ಕೃದಂತಾವ್ಯಯಗಳ ಮೇಲೂ ಸೇರಿಸಬಹುದು.

ಉದಾ : ಅವನು ಹೇಳಿದ್ದರೆ ಬರುತ್ತಾನೆ.

ನಾನು ನೋಡಿದ್ದರೆ ಅದನ್ನು ತರುತ್ತಿದ್ದೆನು.

ಹೀಗೆಯೇ ಕೊಟ್ಟಿದ್ದರೆ, ಬಿದ್ದಿದ್ದರೆ, ನಕ್ಕಿದ್ದರೆ, ಬರೆದಿದ್ದರೆ, ಇತ್ಯಾದಿ.

ನೋಡಿದಿದ್ದರೆ, ಕೊಟ್ಟಿದಿದ್ದರೆ ಮುಂತಾದ ಪ್ರಯೋಗಗಳೂ ಇವೆ. ಇಲ್ಲಿ ನೋಡಿದ್ದು + ಇದ್ದರೆ ಎಂದು ಬಿಡಿಸಿಕೊಳ್ಳಬೇಕು. 'ನೋಡಿದ ಕ್ರಿಯೆ ನಡೆದಿದ್ದರೆ' ಎಂದರ್ಥ.



## ಅವ್ಯಯ ಪ್ರಕರಣ

ಲಿಂಗ, ವಚನ, ಕಾರಕಾದ್ಯರ್ಥಗಳಿಗೆ ಅನುಗುಣವಾಗಿ ಪ್ರತ್ಯಯಗಳು ಸೇರುವುದರಿಂದ ಶಬ್ದಗಳು ರೂಪಭೇದಗಳನ್ನು ಪಡೆಯುತ್ತವೆ. ಯಾವ ಅರ್ಥದಲ್ಲಿಯೂ ಪ್ರತ್ಯಯವನ್ನು ಪಡೆಯದೆ ಏಕರೂಪದಲ್ಲಿ ನಿಲ್ಲುವ ಶಬ್ದಗಳಿಗೆ ಅವ್ಯಯಗಳೆಂದು ಹೆಸರು. ಅವ್ಯಯಗಳಲ್ಲಿ **ಸಾಮಾನ್ಯಾವ್ಯಯ, ಅನುಕರಣಾವ್ಯಯ, ಭಾವಸೂಚಕಾವ್ಯಯ, ಕ್ರಿಯಾರ್ಥಕಾವ್ಯಯ, ಸಂಬಂಧಾರ್ಥಕಾವ್ಯಯ, ಅವಧಾರಣಾರ್ಥಕಾವ್ಯಯ, ಕೃದಂತಾವ್ಯಯ, ತದ್ಧಿತಾಂತಾವ್ಯಯ**- ಎಂದು ಎಂಟು ವಿಧ.

**೧. ಸಾಮಾನ್ಯಾವ್ಯಯ:** ಮೆಲ್ಲನೆ, ಮೆಲ್ಲಗೆ, ಸುಮ್ಮನೆ, ಸುಮ್ಮಗೆ, ಥಟ್ಟನೆ, ನೆಟ್ಟನೆ, ನೆಟ್ಟಗೆ, ಬೇಗ, ಬೇಗನೆ, ಹಾಗೆ, ಹೀಗೆ, ಕೂಡಲೆ, ಒಡನೆ, ಸುತ್ತಲೂ, ಮುಂದೆ, ಹಿಂದೆ, ಕೆಳಗೆ, ಮೇಲೆ, ಅಂತು, ಇಂತು, ಬೇರೆ, ಆಗ, ಈಗ- ಇತ್ಯಾದಿ. ಇವು ಕ್ರಿಯಾವಿಶೇಷಣಗಳು.

**೨. ಅನುಕರಣಾವ್ಯಯ:** ಘಟಘಟ, ಘಟಘಟನೆ, ದಬದಬ, ದಬದಬನೆ, ಸರಸರ, ಸರಸರನೆ, ದೊಪ್ಪನೆ, ಭಗ್ಗನೆ- ಇತ್ಯಾದಿ. ಇವು ಕ್ರಿಯಾವಿಶೇಷಣಗಳು.

**೩. ಭಾವಸೂಚಕಾವ್ಯಯ:** ಆ, ಈ, ಓ, ಓಹೊ, ಅಯ್ಯೋ, ಅಯ್ಯಯ್ಯೋ, ಹಾ, ಎಲಾ, ಎಲೆಲಾ, ಎಲೊ, ಎಲೈ, ಎಲೌ, ಛೆ, ಥೂ, ಅಬ್ಬಾ, ಆಹಾ, ಅಹಹ, ಅಕ್ಕಟಾ, ಹೊ, ಹಹಹ- ಇತ್ಯಾದಿ.

**೪. ಕ್ರಿಯಾರ್ಥಕಾವ್ಯಯ:** ಉಂಟು, ಬೇಕು, ಬೇಡ, ಇಲ್ಲ, ಹೌದು, ಅಲ್ಲ, ಸಾಕು - ಇತ್ಯಾದಿ.

**೫. ಸಂಬಂಧಾರ್ಥಕಾವ್ಯಯ :** ಮತ್ತು, ಅಥವಾ, ತರುವಾಯ, ಬಳಿಕ, ಇನ್ನು, ಇನ್ನೂ, ಆಮೇಲೆ, ಆದ್ದರಿಂದ, ಆದದ್ದರಿಂದ, ಆದುದರಿಂದ, ಅಲ್ಲದೆ, ಇತ್ಯಾದಿ.

**೬. ಅವಧಾರಣಾರ್ಥಕಾವ್ಯಯ :** ಏ=ನೀನೆ, ರಾಮನೇ.

**೭. ಕೃದಂತಾವ್ಯಯ:** ಆಗಿ, ಹೋಗಿ, ಹೋಗಲು, ಮಾಡಿ, ಕಂಡು, ಬಂದು ನೋಡುತ್ತ, ಹೇಳುತ್ತ, ನೋಡದೆ, ಹೇಳದೆ, ಓದಲಿಕ್ಕೆ, ಬರೆಯಲಿಕ್ಕೆ ಇತ್ಯಾದಿ.

**೮. ತದ್ಧಿತಾಂತಾವ್ಯಯ :** ರಾಮನಂತೆ, ಅವಳೋಪಾದಿಯಲ್ಲಿ, ಊರಿನವರೆಗೆ, ಸಂಜೆಯತನಕ, ನಿನ್ನ ಮಟ್ಟಿಗೆ, ಅವನಿಗಿಂತ, ಅದಕ್ಕಾಗಿ- ಇತ್ಯಾದಿ.

# ದ್ವಿರುಕ್ತಿ ಪ್ರಕರಣ

ಅರ್ಥವಿಶೇಷವು ತೋರುವಾಗ ಒಂದೇ ಪದಕ್ಕೆ ಎರಡು ಸಲ ಪ್ರಯೋಗವಾಗುತ್ತದೆ. ಇದಕ್ಕೆ ದ್ವಿರುಕ್ತಿಯೆಂದು ದ್ವಿತ್ವವೆಂದೂ ಹೆಸರು. ಹೀಗೆ ದ್ವಿರುಕ್ತಿಯಾದಾಗ ಮೊದಲನೆಯ ಪದಕ್ಕೆ ಲೋಪ, ಆದೇಶ ಮುಂತಾದ ವಿಕಾರಗಳು ಕೆಲವೆಡೆ ಬರುತ್ತವೆ.

೧. ಅಭೀಕ್ಷ್ಣ್ಯ ( ಕ್ರಿಯೆ ಮತ್ತೆ ಮತ್ತೆ ನಡೆಯುವುದು), ವೀಪ್ಸೆ (ಎಲ್ಲ ವಸ್ತುಗಳಿಗೂ ಕ್ರಿಯಾಸಂಬಂಧ) ತೋರುವಾಗ ದ್ವಿತ್ವ ಬರುತ್ತದೆ.

ಉದಾ: ಅಭೀಕ್ಷ್ಣ್ಯಕ್ಕೆ- ಮಾಡಿಮಾಡಿ ಬೇಸತ್ತನು. ಓದುತ್ತಾನೆ, ಓದುತ್ತಾನೆ. ಕೆಣಕಿಕೆಣಕಿ- ಕೆಣಕಿಕೆಣಕಿ, ನರಳಿನರಳಿ-ನರಳಿನರಳಿ.

ವೀಪ್ಸೆಗೆ- ಮರಮರವೂ ಸೊಂಪಾಗಿ ಬೆಳೆದಿದೆ, ಒಂದೊಂದನ್ನೂ- ನೋಡಿದನು. ಬಳ್ಳಿಬಳ್ಳಿಗೂ ನೀರೆರೆಯುತ್ತಾಳೆ.

೨. ಮೇಲೆ, ಕೆಳಗೆ, ನಡುವೆ- ಮುಂತಾದ ಅರ್ಥವಿರುವ ಪದಗಳಿಗೆ ಕ್ರಮವರಿತ ಸಾಮಿಪ್ಯ ತೋರುವಾಗ ದ್ವಿತ್ವಬರುತ್ತದೆ.

ಉದಾ: ಮೇಲೆಮೇಲೆ, ಕೆಳಕೆಳಗೆ, ನಡುನಡುವೆ, ಮಧ್ಯಮಧ್ಯದಲ್ಲಿ, ಹತ್ತಹತ್ತಿರ, ಮೊದಮೊದಲು, ಕಡೆಕಡೆಗೆ.

೩. ಕ್ರಿಯಾತಿಶಯವು ತೋರುವಾಗ ಆಜ್ಞಾರ್ಥದ ಮಧ್ಯಮಪುರುಷಕ್ಕೆ ದ್ವಿತ್ವಬಂದು ಅದೇ ಧಾತುವಿಗೆ ಅನುಪ್ರಯೋಗ ಬರುತ್ತದೆ.

ಉದಾ: ಅಳು ಅಳು ಎಂದು ಮಗು ಅಳುತ್ತದೆ. ತಿನ್ನು ತಿನ್ನು ಎಂದು ತಿನ್ನುತ್ತಿದ್ದನು. ಆಡಿರಿ ಆಡಿರಿ ಎಂದು ಆಡುತ್ತಲೇ ಇದ್ದರು.

೪. ವಿಶೇಷ್ಯವು ಬಹಳವಾಗಿದ್ದು ಸಾದೃಶ್ಯವು ತೋರುವಾಗ ಗುಣವಾಚಕಗಳಿಗೆ ದ್ವಿತ್ವ ಬರುತ್ತದೆ.

ಉದಾ: ದೊಡ್ಡ ದೊಡ್ಡ ಬಂಡೆಗಳು. ಇಲ್ಲಿ ಬಂಡೆಗಳು ವಿಶೇಷ್ಯ, ದೊಡ್ಡತನದಿಂದ ಅವುಗಳಿಗೆ ಪರಸ್ಪರ ಸಾದೃಶ್ಯ. ಹೀಗೆಯೇ ಚಿಕ್ಕಚಿಕ್ಕ, ಹೆಚ್ಚುಹೆಚ್ಚು, ಸಣ್ಣ ಸಣ್ಣ, ಬೆಳ್ಳಬೆಳ್ಳಗೆ.

೫. ಅಸೂಯೆ, ಕೋಪ, ನಿಂದೆ, ಗೌರವ, ಪ್ರೀತಿ, ಶೋಕ, ತ್ವರೆ- ಮುಂತಾದ ಮನೋಭಾವಗಳ ಅತಿಶಯವು ತೋರುವಾಗ ವಾಕ್ಯಾದಿಯಲ್ಲಿರುವ ಸಂಬೋಧನ ಪದಕ್ಕೆ ಅಥವಾ ಭಾವಸೂಚಕಾವ್ಯಯಕ್ಕೆ ದ್ವಿತ್ವ ಬರುತ್ತದೆ.

ಉದಾ: ಅಸೂಯೆಗೆ- ಜಾಣ ಜಾಣ, ನಿನ್ನ ಜಾಣತನದಿಂದ ಏನಾಯಿತು?

ಕೋಪಕ್ಕೆ- ಎಲ ಎಲಾ, ಏನು ಕೆಲಸ ಮಾಡಿದೆ?

ನಿಂದೆಗೆ- ದುರುಳ ದುರುಳ, ಹೆಚ್ಚು ಮಾತಾಡಬೇಡ

ಗೌರವಕ್ಕೆ- ಸ್ವಾಮಿ ಸಾಮಿ, ನಿನಗೆ ಶರಣಾದೆನು.

ಪ್ರೀತಿಗೆ- ಮಗು ಮಗು ಇತ್ತ ಬಾ.

ಶೋಕಕ್ಕೆ- ಅಯ್ಯೊ ಅಯ್ಯೊ, ನನ್ನನ್ನು ಬಿಟ್ಟು ಹೋದೆಯಾ?

ತ್ವರೆಗೆ- ಹುಡುಗ ಹುಡುಗ, ಬೇಗ ಬಾ.

ಮೇಲ್ಕಂಡ ಅರ್ಥದಲ್ಲಿ ಸಂಪೂರ್ಣ ವಾಕ್ಯಕ್ಕೂ ದ್ವಿತ್ವ ಬರುವುದುಂಟು.

ಉದಾ: ನಿನಗೆ ಶರಣಾದೆನು, ನಿನಗೆ ಶರಣಾದೆನು. ಬೇಗ ಬಾ, ಬೇಗ ಬಾ.

೬. ಆಧಿಕ್ಯಾರ್ಥದಲ್ಲಿ ಪದಗಳಿಗೆ ದ್ವಿತ್ವ ಬರುತ್ತದೆ.

ಉದಾ: ಕಟ್ಟಕಡೆಗೆ, ನಟ್ಟನಡುವೆ, ತುತ್ತ ತುದಿ, ಮೊತ್ತ ಮೊದಲು- ಮೊಟ್ಟ ಮೊದಲು, ಬಟ್ಟಬಯಲು, ಪಟಪಟಪಟನೆ, ಧಡಧಡನೆ, ಕೊಟ್ಟಕೊನೆ ಎಂಬುದೂ ರೂಢಿಯಲ್ಲಿದೆ.

೭. ನಿಯತವಾದ ವಿಭಜನೆ ತೋರುವಾಗ ಸಂಖ್ಯಾವಾಚಕಕ್ಕೆ ದ್ವಿತ್ವ ಬರುತ್ತದೆ.

ಉದಾ: ನಾಲ್ಕು ನಾಲ್ಕು ಹಣ್ಣುಗಳನ್ನು ಕೊಡುತ್ತಾನೆ. ಇಬ್ಬ ಇಬ್ಬರಾಗಿ ಹೋಗಬೇಕು.

೮. ಕ್ರಿಯೆ ಅನ್ಯೋನ್ಯವಾಗಿ ನಡೆಯಿತೆಂಬುದನ್ನು ಸೂಚಿಸುವಾಗ ಕಾರಕಗಳಿಗೆ ದ್ವಿತ್ವ ಬರುತ್ತದೆ.

ಉದಾ: ಅವರವರೇ ಹಂಚಿಕೊಳ್ಳುತ್ತಾರೆ. ಹುಡುಗ ಹುಡುಗರಿಗೆ ಸ್ಪರ್ಧೆ ನಡೆಯಿತು.

## ಪ್ರಯೋಗ ಪ್ರಕರಣ

### ೧. ಕರ್ತರಿಪ್ರಯೋಗ, ಕರ್ಮಣಿಪ್ರಯೋಗ

ಕ್ರಿಯಾಪದಕ್ಕೆ ಕರ್ತರಿ ಪ್ರಯೋಗ ಕರ್ಮಣಿಪ್ರಯೋಗವೆಂದು ಎರಡು ಬಗೆಯ ಪ್ರಯೋಗಗಳುಂಟು. ಆಖ್ಯಾತಪ್ರತ್ಯಯವು ಕರ್ತ್ರರ್ಥದಲ್ಲಿ ಬಂದರೆ ಕರ್ತರಿ ಪ್ರಯೋಗ ವೆಂದೂ ಕರ್ಮಾರ್ಥದಲ್ಲಿ ಬಂದರೆ ಕರ್ಮಣಿಪ್ರಯೋಗವೆಂದೂ ಹೆಸರು.

೧. ಕರ್ತರಿ ಪ್ರಯೋಗದಲ್ಲಿ ಕ್ರಿಯಾಪದವು ಕರ್ತೃವಿನ ಲಿಂಗ, ವಚನ, ಪುರುಷಗಳನ್ನು ಅನುಸರಿಸುತ್ತದೆ. ಕರ್ತೃಪದವು **ಪ್ರಥಮಾವಿಭಕ್ತಿ**ಯಲ್ಲಿಯೂ

ಕರ್ಮಪದವು **ದ್ವಿತೀಯಾವಿಭಕ್ತಿ**ಯಲ್ಲಿಯೂ ಕೆಲವೆಡೆ **ಚತುರ್ಥೀವಿಭಕ್ತಿ**ಯಲ್ಲಿಯೂ ಇರುತ್ತದೆ. ಕರ್ತರಿ ಪ್ರಯೋಗವು **ಅಕರ್ಮಕ, ಸಕರ್ಮಕಧಾತು**ಗಳೆರಡಕ್ಕೂ ಬರುತ್ತದೆ.

ಉದಾ: ಹುಡುಗನು **ಪಾಠವನ್ನು** ಓದುತ್ತಾನೆ

ನಾವು **ಇದನ್ನು** ಒಪ್ಪಲಾರೆವು

ಹುಡುಗಿ **ಮನೆಗೆ** ಹೋದಳು( ಇಲ್ಲಿ 'ಮನೆ' ಕರ್ಮಪದ)

ಮಗು ನಗುತ್ತದೆ

ಹಸುಗಳು ಕೊಟ್ಟಿಗೆಯಲ್ಲಿ ಇದ್ದವು.

ನೀನು ಹೇಳುತ್ತೀಯೆ

ನೀವು ಆಗ ಬಂದಿರಿ

೨. ಕರ್ಮಣಿಪ್ರಯೋಗದಲ್ಲಿ ಕ್ರಿಯಾಪದವು ಕರ್ಮದ ಲಿಂಗ, ವಚನ, ಪುರುಷಗಳನ್ನು ಅನುಸರಿಸುತ್ತದೆ. ಕರ್ತೃಪದವು **ತೃತೀಯಾ ವಿಭಕ್ತಿ**ಯಲ್ಲಿಯೂ ಕರ್ಮಪದವು **ಪ್ರಥಮಾವಿಭಕ್ತಿ**ಯಲ್ಲಿಯೂ ಇರುತ್ತದೆ. ಕರ್ಮಣಿಪ್ರಯೋಗವು **ಸಕರ್ಮಕಧಾತು**ಗಳಿಗೆ ಮಾತ್ರ ಬರುತ್ತದೆ.

ಕರ್ಮಣಿಪ್ರಯೋಗದಲ್ಲಿ ಧಾತುಗಳ ಮುಂದೆ **'ಅಲ್'** ಪ್ರತ್ಯಯವು ಬಂದು ಅದರ ಮುಂದೆ **' ಪಡು'** ಧಾತುವಿಗೆ ಅನುಪ್ರಯೋಗವಾಗುತ್ತದೆ.

ಉದಾ: ಹುಡುಗನಿಂದ ಪಾಠಗಳು ಓದಲ್ಪಡುತ್ತವೆ.

ಮಾವುತರಿಂದ ಆನೆ ಸೆರೆ ಹಿಡಿಯಲ್ಪಟ್ಟಿತು.

ಕೌರವರಿಂದ ದ್ರೌಪದಿ ಅವಮಾನಿಸಲ್ಪಟ್ಟಳು.

ಹೀಗೆ ಮಾಡಿದರೆ ನೀನು ಅಧಿಕಾರಿಗಳಿಂದ ದಂಡಿಸಲ್ಪಡುತ್ತೀಯೆ

ಗುರುಗಳಿಂದ ನಾನು ಆಜ್ಞಾಪಿಸಲ್ಪಟ್ಟೆನು

**ಟಿಪ್ಪಣಿ:** ಈ ಬಗೆಯಲ್ಲಿ ಧಾತುವಿಗೆ 'ಅಲ್ಪಡು' ಎಂಬುದನ್ನು ಸೇರಿಸಿದ ಕರ್ಮಣಿ ಪ್ರಯೋಗವು ಕನ್ನಡ ಭಾಷೆಗೆ ಸರಿಯಾಗಿ ಒಗ್ಗುವುದಿಲ್ಲ. ಇಂಥ ಪ್ರಯೋಗಗಳನ್ನು ಆದಷ್ಟು ಕಡಿಮೆಯಾಗಿ ಬಳಸುವುದು ಉತ್ತಮ. ಆದರೆ ಸಂಸ್ಕೃತ ಕೃದಂತಗಳ ಯೋಗವಿದ್ದಾಗ ಕರ್ಮಣಿಪ್ರಯೋಗ ಪ್ರಚುರವಾಗಿದೆ.

ಉದಾ: ೧. ಈ ಮಾತು ಕೇಶಿರಾಜನಿಂದ ಉಕ್ತವಾಗಿದೆ

೨. ಕನ್ನಡ ಕವಿಗಳಿಂದ ಉತ್ತಮ ಕಾವ್ಯಗಳು ರಚಿತವಾಗಿವೆ.

೩. ರಾಮನಿಂದ ರಾಕ್ಷಸರು ಹತರಾದರು

೪. ಈ ಪುಸ್ತಕ ವಿಶ್ವವಿದ್ಯಾಲಯದಿಂದ ಪ್ರಕಾಶಿತವಾಗಿದೆ.

೫.ಈ ಮನೆಗಳು ಬಡವರಿಗಾಗಿ ಸರ್ಕಾರದಿಂದ ನಿರ್ಮಿತ ವಾದವು

**ವಿಶೇಷ:** ಸಂಸ್ಕೃತದಲ್ಲಿ ಭಾವೇಪ್ರಯೋಗವೆಂಬ ಇನ್ನೊಂದು ಬಗೆಯ ಪ್ರಯೋಗವಿದೆ. ಅದು ಅಕರ್ಮಕಧಾತುವಿಗೆ ಮಾತ್ರ ಬರುತ್ತದೆ.

ಉದಾ: ಬಾಲೇನ ಸ್ಥೀಯತೇ= ಹುಡುಗನಿಂದ ಇರೋಣವಾಗುತ್ತದೆ

ಶಿಶುನಾ ರುದ್ಯತೇ= ಮಗುವಿನಿಂದ ಅಳೋಣವಾಗುತ್ತದೆ.

ಕನ್ನಡದಲ್ಲಿ ಭಾವೇಪ್ರಯೋಗವಿಲ್ಲ. ಮೇಲ್ಕಂಡ ಅನುವಾದದಲ್ಲಿ **ಇರೋಣ, ಅಳೋಣ** ಎಂಬ ಕೃದಂತಗಳು ಕರ್ತೃಪದಗಳು. ಆಗುತ್ತದೆ ಕ್ರಿಯಾಪದ. **ಹುಡುಗನಿಂದ, ಮಗುವಿನಿಂದ** ಎಂಬಿವೂ ಕರ್ತೃಪದಗಳೇ. ಇಂಥ ಕರ್ತೃಪದಗಳಿಗೆ ಭಾವಾರ್ಥಕ ಕೃದಂತಲ್ಲಿ (ಇರೋಣ, ಅಳೋಣ ಎಂಬುದರ ಕ್ರಿಯೆಗಳಲ್ಲಿ) ಅನ್ವಯವಿದ್ದಾಗ **ತೃತೀಯಾವಿಭಕ್ತಿ** ಬರುತ್ತದೆ. ಕೆಲವೆಡೆ **ಪ್ರಥಮಾವಿಭಕ್ತಿ** ಬರುವುದೂ ಉಂಟು.

ಉದಾ: ತಾವು ದಯಮಾಡಿಸೋಣವಾಗಲಿ. ನೀವು ಉಪನ್ಯಾಸ ಮಾಡೋಣವಾಗಲಿ. ಇವೂ ಕರ್ತರಿಪ್ರಯೋಗಗಳೇ. ಈ ಬಗೆಯವು ಕನ್ನಡಕ್ಕೆ ಸಹಜವಲ್ಲ.

**೨. ಲಿಂಗ, ವಚನ, ಪುರುಷ.**

ಕರ್ತರಿ ಪ್ರಯೋಗದಲ್ಲಿ ಕರ್ತೃವನ್ನೂ ಕರ್ಮಣಿಯೋಗದಲ್ಲಿ ಕರ್ಮವನ್ನೂ ಅನುಸರಿಸಿ ಕ್ರಿಯಾಪದಕ್ಕೆ ಲಿಂಗ, ವಚನ, ಪುರುಷಗಳು ಬರುತ್ತವೆಯೆಂದು ಹಿಂದೆ ತಿಳಿಸಿದೆ.

೧. ಬಿನ್ನಲಿಂಗಗಳಾದ ಅನೇಕ ಕರ್ತೃಗಳಿರುವಾಗ ಕೊನೆಯಲ್ಲಿರುವ ಕರ್ತೃವಿನ ಲಿಂಗವೇ ಕ್ರಿಯಾಪದಕ್ಕೆ ಬರುವುದು.

ಉದಾ: ಸೈನಿಕರೂ ರಥಗಳೂ ಬಂದವು

ರಥಗಳೂ ಸೈನಿಕರೂ ಬಂದರು

೨. ಜಾತ್ಯೇಕವಚನದ ಕರ್ತೃವಿದ್ದಾಗ ಕ್ರಿಯಾಪದವು ವಿಕಲ್ಪವಾಗಿ ಬಹುವಚನವನ್ನು ಪಡೆಯುತ್ತದೆ.

ಉದಾ: ಕುದುರೆ ಬಂದಿತು ಕುದುರೆ ಬಂದವು

ಜೇನುಹುಳು ಮುತ್ತಿತು ಜೇನುಹುಳು ಮುತ್ತಿದವು

ಜನ ಸೇರಿತು ಜನ ಸೇರಿದರು

**ವಿಶೇಷ:** ಜನಶಬ್ದವು ಏಕವಚನದಲ್ಲಿ ನಪುಂಸಕ. ಬಹುವಚನದಲ್ಲಿ ಪುಲ್ಲಿಂಗ.

೩. ಕರ್ತೃವಾದ 'ನಾನು' ಶಬ್ದದ ಸಹಯೋಗವಿದ್ದಲ್ಲಿ ಎಲ್ಲೆಡೆಯೂ ಉತ್ತಮಪುರುಷ ಬರುತ್ತದೆ.

ಉದಾ: ನಾನೂ ನೀನೂ ಅವನೂ ಬಂದೆವು

ನಾನೂ ಅವಳೂ ರಾಮನೂ ಬಂದೆವು

೪. ಕರ್ತೃವಾದ 'ನೀನು' ಶಬ್ದದ ಸಹಯೋಗವಿದ್ದಲ್ಲಿ ('ನಾನು' ಇಲ್ಲದಿದ್ದಾಗ) ಮಧ್ಯಮಪುರುಷ ಬರುತ್ತದೆ.

ಉದಾ: ನೀನೂ ವಿಮಲೆಯೂ ಬಂದಿರಿ

ನೀನೂ ಅವನೂ ಅವಳೂ ಬಂದಿರಿ

ಈ ವಾಕ್ಯಗಳನ್ನು ಗಮನಿಸಬೇಕು-

೧. ಈ ಕುಟುಂಬದಲ್ಲಿ ತಂದೆ, ತಾಯಿ, ಒಂದು ಮಗು ಇವೆ. ಇವು ಕ್ಷೇಮವಾಗಿವೆ.

೨. ರಾಜನೂ ಮಂತ್ರಿಯೂ ರಥವೂ ಬಂದವು. ಇವು ವೇಗವಾಗಿ ಬಂದವು.

'ಕೊನೆಯಲ್ಲಿರುವ ಕರ್ತೃವಿನ ಲಿಂಗವೇ ಕ್ರಿಯಾಪದಕ್ಕೆ ಬರುವುದು' ಎಂದು ಹೇಳಿರುವ ಮೊದಲನೆಯ ನಿಯಮದಂತೆ ಈ ವಾಕ್ಯಗಳಲ್ಲಿ ನಪುಂಸಕಲಿಂಗ ಸಾಧುವಾಗಬೇಕಾಗುತ್ತದೆ. ಆಗ 'ಇವು' ಎಂದು ನಪುಂಸಕ ಸರ್ವನಾಮದಿಂದ ಪರಾಮರ್ಶವು ಯೋಗ್ಯವಾಗುತ್ತದೆ. ಇಂಥ ಪ್ರಯೋಗ ಈಗ ರೂಢಿಯಲ್ಲಿಲ್ಲ. 'ಈ ಕುಟುಂಬದಲ್ಲಿ ತಂದೆ, ತಾಯಿ, ಒಂದು ಮಗು ಇದ್ದಾರೆ. ಇವರು ಕ್ಷೇಮವಾಗಿದ್ದಾರೆ' ಎನ್ನುವುದೇ ಹಿತಕರ. ಮೇಲಿನ ಎರಡನೆಯ ವಾಕ್ಯವೂ ಹಿತಕರವಲ್ಲ. ಚೇತನ- ಅಚೇತನಗಳ ಸಮುಚ್ಚಯವೇ ಯುಕ್ತವಲ್ಲ. ಈ ವಾಕ್ಯವನ್ನು 'ರಾಜನೂ ಮಂತ್ರಿಯೂ ರಥದೊಡನೆ ಬಂದರು' ಎಂದು ಬೇಕಾದರೆ ತಿದ್ದಿ ಹೇಳಬಹುದು.

**೫. ತಾನು ಶಬ್ದ:** ಇದಕ್ಕೆ 'ಸ್ವಯಂ' (self) ಎಂದು ಅರ್ಥವಿದೆ. ಇದರ ಬಹುವಚನವಾದ ತಾವು ಎಂಬುದಕ್ಕೆ ಗೌರವಾರ್ಥದಲ್ಲಿ ನೀವು ಎಂಬ ಅರ್ಥವೂ ಇದೆ. 'ಸ್ವಯಂ' ಅರ್ಥಕ್ಕೆ- ತಾನು ಮಾಡಿದ್ದು ಉತ್ತಮ: ಮಗ ಮಾಡಿದ್ದು ಮಧ್ಯಮ.

ಉದಾ: ಗೌರವಾರ್ಥದಲ್ಲಿ : ತಾವು ಸಭೆಗೆ ಆಗಮಿಸಬೇಕು

ತಮ್ಮಿಂದ ಉಪಕಾರವಾಯಿತು

**೩. ವಿಶೇಷಣಗಳು**

ನಾಮವಿಶೇಷಣಗಳು ನಾಮಪದಗಳ ಹಿಂದೆಯೂ ಅವುಗಳ ಮುಂದೆಯೂ ಬರಬಹುದು. ಹಿಂದೆ ಬರುವ ವಿಶೇಷಣಗಳಿಗೆ ಅನುವಾದ್ಯ ವಿಶೇಷಣಗಳೆಂದೂ ಮುಂದೆ ಬರತಕ್ಕವುಗಳಿಗೆ ವಿಧೇಯ ವಿಶೇಷಣಗಳೆಂದೂ ಹೆಸರು. ಇವುಗಳಿಗೆ ಸೂಕ್ಷ್ಮವಾದ ಅರ್ಥಭೇದವಿದೆ. ವಿಧೇಯವಿಶೇಷಣವು ಮಾತ್ರ ಪ್ರಥಮಾವಿಭಕ್ತಿಯಲ್ಲಿರುತ್ತದೆ.

ಉದಾ : ಅನುವಾದ್ಯ ವಿಶೇಷಣ- ಓದುವ ಹುಡುಗ, ಒಳ್ಳೆಯ ಹಣ್ಣನ್ನು ತಿಂದನು.

ವಿಧೇಯ ವಿಶೇಷಣ- ಈ ಹುಡುಗ ಓದುವವನು, ಹಣ್ಣು ಒಳ್ಳೆಯದು.

೧. ಪ್ರಥಮಾಂತ ಪದಗಳಿಗೆ **ಆದ, ಆದಂಥ** ಎಂಬ ಶಬ್ದಗಳನ್ನು ಸೇರಿಸಿದರೆ ವಿಶೇಷಣಗಳಾಗುತ್ತವೆ. ವಿಧೇಯ ವಿಶೇಷಣಕ್ಕೆ ಇವು ವಿಕಲ್ಪವಾಗಿ ಬರುತ್ತವೆ.

ಉದಾ: ದಶರಥನ ಮಗನಾದ ರಾಮ, ಪಾಂಡುವಿನ ಮಕ್ಕಳಾದಂಥ ಪಾಂಡವರು.

ಅವನು ಜಾಣ,- ಜಾಣನಾದವನು,- ಜಾಣನಾದಂಥವನು.

೨. **ಉಳ್ಳ** ಎಂಬುದು ನಾಮವಾಚಕದ ಮೇಲೂ ಕೃದಂತ ತದ್ಧಿತಾಂತ ಭಾವನಾಮಗಳ ಮೇಲೂ ಸೇರಿ ವಿಶೇಷಣವಾಗುವುದು. ಇದರ ಮುಂದೆ **ಅಂಥ** ಎಂಬುದೂ ಸೇರುವುದುಂಟು.

ಉದಾ: ನಾಮವಾಚಕ : ಹಣವುಳ್ಳ ಹೂವುಳ್ಳ, ಹೂವುಳ್ಳಂಥ.

ಕೃದಂತ ಭಾವನಾಮ: ತಾಳ್ಮೆಯುಳ್ಳ, ಮಾಟವುಳ್ಳ, ಬುದ್ಧಿಯುಳ್ಳ, ಬುದ್ಧಿಯುಳ್ಳಂಥ.

ತದ್ಧಿತಾಂತಭಾವನಾಮ: ಜಾಣ್ಮೆಯುಳ್ಳ, ಪಾಂಡಿತ್ಯವುಳ್ಳ, ಪಾಂಡಿತ್ಯವುಳ್ಳಂಥ.

೩. ವಿಶೇಷ್ಯವು ಬಹುವಚನದಲ್ಲಿದ್ದರೂ ವಿಧೇಯವಿಶೇಷಣವು ಕೆಲವೆಡೆ ಏಕವಚನದಲ್ಲಿರುತ್ತದೆ.

ಉದಾ: ವೇದಗಳು ಪ್ರಮಾಣ. ಆಯುಧಗಳು ಜಯಕ್ಕೆ ಕಾರಣ.

೪. ವಿಶೇಷಣವು ನಪುಂಸಕವಾದರೂ ವಿಶೇಷ್ಯಾನುಸಾರಿಯಾದ ಪ್ರತ್ಯಯ ಹತ್ತುತ್ತದೆ.

ಉದಾ: ದ್ರೌಪದಿ ಕೌರವರ ಸಾವಿಗೆ ನಿಮಿತ್ತಳು

ಪಾಂಡವರ ಜಯಕ್ಕೆ ಮೂಲನಾದ ಕೃಷ್ಣ

೫. ಕೃದಂತ ವಿಶೇಷಣಗಳು ಎಲ್ಲ ಕಾರಕಾರ್ಥಗಳಲ್ಲಿಯೂ ಬರುತ್ತವೆ.

ಕರ್ತ್ರರ್ಥ: ಓದುವ ಹುಡುಗ, ಹಾಡುವ ಹಕ್ಕಿ

ಕರ್ಮಾರ್ಥ: ಓದುವ ಪುಸ್ತಕ, ಹಾಡುವ ಪದ್ಯ

ಕರಣಾರ್ಥ: ಕಡಿಯುವ ಕೊಡಲಿ (ಕಡಿಯುವ ಸಾಧನ), ಬರೆಯುವ ಲೇಖನಿ.

ಸಂಪ್ರದಾನಾರ್ಥ: ಕೊಡುವ ಭಿಕ್ಷುಕ (ಯಾರಿಗೆ ಕೊಡಬೇಕೋ ಅವನು), ನೀರೆರೆಯುವ ಬಳ್ಳಿ.

ಅಪಾದಾನಾರ್ಥ: ಅಂಜುವ ಕೆಲಸ (ಯಾವುದರ ದೆಸೆಯಿಂದ ಅಂಜಿಕೆಯೋ ಅದು), ಹೆದರುವ ಹಾವು.

ಅಧಿಕರಣಾರ್ಥ: ಬರೆಯುವ ಕಾಗದ (ಯಾವುದರಲ್ಲಿ ಬರೆಯುತ್ತೇವೋ ಅದು), ಈಜುವ ಕೊಳ

ಹೀಗೆಯೇ ಓದತಕ್ಕ, ಓದಿದ, ಕಡಿಯತಕ್ಕ, ಕಡಿದ ಮೊದಲಾದವು.

ಇದರ ಮುಂದೆ **ಅಂಥ** ಎಂಬ ಅವ್ಯಯ ಬರಬಹುದು- ಓದುವಂಥ, ಕಡಿಯುವಂಥ.

೪. ವಿಶೇಷಾರ್ಥದ ಧಾತುಗಳು

ಕೆಲವು ಧಾತುಗಳು ಕೃದಂತಾವ್ಯಯಗಳ ಮೇಲೆ ಸೇರಿ ಕ್ರಿಯೆಗೆ ಅರ್ಥವಿಶೇಷವನ್ನು ಕೊಡುತ್ತವೆ.

೧. **ಬಿಡ, ಇಡು, ಹಾಕು** ಎಂಬ ಧಾತುಗಳು ಸೇರಿ ಕ್ರಿಯೆಗೆ ನಿಶ್ಚಯಾರ್ಥವನ್ನು ಕೊಡುತ್ತವೆ.

ಉದಾ: ಸಾಲವನ್ನು ತೀರಿಸಿಬಿಟ್ಟನು. ಕಷ್ಟವನ್ನು ತಂದಿಡುತ್ತಾನೆ. ಮರವನ್ನು ಕಡಿದು ಹಾಕಿದನು.

೨. **ಕೊಡು** ಧಾತು ಸೇರಿ, ಕ್ರಿಯೆ ಪರಾರ್ಥವೆಂದು ಸೂಚಿಸುತ್ತದೆ.

ಉದಾ: ಅವನಿಗೆ ಅರ್ಥವನ್ನು ಹೇಳಿಕೊಡುತ್ತೇನೆ. ಹುಡುಗನಿಗೆ ದಾರಿಯನ್ನು ತೋರಿಸಿಕೊಟ್ಟನು.

೩. **ಕೊಳ್ಳು** ಧಾತು ಸೇರಿ, ಕ್ರಿಯೆ ತನಗಾಗಿ ಎಂದು ಸೂಚಿಸುತ್ತದೆ.

ಉದಾ: ಧ್ರುವನು ವರವನ್ನು ಬೇಡಿಕೊಂಡನು. ಅವಳು ಹಾಡನ್ನು ಹೇಳಿಕೊಳ್ಳುತ್ತಾನೆ.

೪. **ಆಡು** ಧಾತು ಸೇರಿ, ಕ್ರಿಯೆ ಅನೇಕಾವೃತ್ತಿ ನಡೆಯಿತೆಂಬ ಅರ್ಥವನ್ನೂ ಕೆಲವೆಡೆ ಪರಸ್ಪರವಾಗಿ ನಡೆಯಿತೆಂಬ ಅರ್ಥವನ್ನೂ ತೋರಿಸುತ್ತದೆ.

ಉದಾ: ಅನೇಕಾವೃತ್ತಿ: ಹುಡುಗನು ಓಡಾಡುತ್ತಾನೆ(ಓಡಿಯಾಡುತ್ತಾನೆ),

ಹಕ್ಕಿ ಹಾರಾಡುತ್ತದೆ.

ಪರಸ್ಪರ: ಅವರು ಹೊಡೆದಾಡಿದರು, ಬಯ್ದಾಡಿದರು.

೫. **ಬರು, ಹೋಗು, ನಡೆ** ಧಾತುಗಳು ವರ್ತಮಾನ ಕೃದಂತಾವ್ಯಯದ ಮೇಲೆ ಸೇರಿ, ಕ್ರಿಯೆಯ ಅನುವೃತ್ತಿಯನ್ನು ತೋರಿಸುತ್ತವೆ.

ಉದಾ: ಸಾಲವನ್ನು ತೀರಿಸುತ್ತ ಬಂದನು. ಸ್ನೇಹವನ್ನು ಬೆಳಸುತ್ತ ಹೋದನು.

ಪ್ರಶ್ನೆಯನ್ನು ಕೇಳುತ್ತ ನಡೆದನು.

ಹೀಗೆಯೇ ಹೇಳಿನೋಡು, ಕೊಟ್ಟಿರು, ಬಂದುಹೋಗು, ಹೋಗಿಬರು - ಮೊದಲಾದವು ಪ್ರಯೋಗಾನುಸಾರವಾಗಿ ಅರ್ಥವಿಶೇಷವನ್ನು ಕೊಡುತ್ತವೆ.

೫. ಕ್ರಿಯಾಪದಗಳ ರೂಪಪಲ್ಲಟ:

೧. ಭವಿಷ್ಯತ್ಕಾಲದಲ್ಲಿ ವರ್ತಮಾನಕಾಲದ ರೂಪ ಬರುವುದುಂಟು.

ಉದಾ: ನಾಳೆ ಬರುತ್ತೇನೆ. ಮುಂದಿನ ತಿಂಗಳು ಕೊಡುತ್ತೇನೆ.

೨. ವರ್ತಮಾನಕಾಲದಲ್ಲಿ ಭವಿಷ್ಯತ್ತಿನ ರೂಪ ಬರುವುದುಂಟು.

ಉದಾ: ನೋಡು ಅಲ್ಲಿ ಕುಳಿತಿರುವನು,

ಅದೋ ಹಕ್ಕಿ ಹಾರುವುದು.

೩.ತ್ವರೆ, ನಿಶ್ಚಯಗಳು ತೋರುವಾಗ ವರ್ತಮಾನ ಭವಿಷ್ಯತ್ಕಾಲಗಳಲ್ಲಿ ಭೂತಕಾಲದ ರೂಪ ಬರುವುದು.

ಉದಾ: ತ್ವರೆ: ಇದೋ ಬಂದೆನು.

ನಿಶ್ಚಯ: ನಾಳೆ ಕೊಟ್ಟೆನೆಂದು ತಿಳಿ, ಸತ್ಯವನ್ನು ಹೇಳಿದನೋ ಬದುಕಿದನು; ಇಲ್ಲದಿದ್ದರೆ ಕೆಟ್ಟನು.

೪. ಭೂತಕಾಲದ ವೃತ್ತಾಂತವನ್ನು ವಿವರಿಸುವಾಗ ವರ್ತಮಾನಕಾಲದ ಅಥವಾ ಭವಿಷ್ಯತ್ಕಾಲದ ರೂಪಗಳು ಬರಬಹುದು.

ಉದಾ: ಅನಂತರ ಶ್ರೀರಾಮನು ಅಂತಃಪುರಕ್ಕೆ ಹೋಗಿ ಸೀತೆಗೆ ತನ್ನ ವನವಾಸದ ಸುದ್ದಿಯನ್ನು ಹೇಳುವನು. ಆಗ ಸೀತೆ 'ನಾನೂ ಕಾಡಿಗೆ ಬರುತ್ತೇನೆ' ಎನ್ನುವಳು. ಶ್ರೀರಾಮನು ಅವಳಿಗೆ ಅನೇಕ ವಿಧದಲ್ಲಿ ಸಮಾಧಾನ ಹೇಳುತ್ತಾನೆ. ಸೀತೆ ಒಪ್ಪುವುದಿಲ್ಲ. ಲಕ್ಷ್ಮಣನೂ ಶ್ರೀರಾಮನೊಡನೆ ಕಾಡಿಗೆ ಹೋಗಲು ಅಪೇಕ್ಷಿಸುತ್ತಾನೆ. ಆಮೇಲೆ ಮೂವರು ಅರಣ್ಯಕ್ಕೆ ಹೋಗುವರು.

## ಅನುಬಂಧ

ಈಗ ನಾವು ಬಳಸುತ್ತಿರುವ ಕನ್ನಡ ಭಾಷೆಯನ್ನು ಹೊಸಗನ್ನಡವೆನ್ನಬಹುದು. ಹರಿಶ್ಚಂದ್ರಕಾವ್ಯ, ಜೈಮಿನಿ ಭಾರತ, ಗದುಗಿನ ಭಾರತ ಮುಂತಾದ ಷಟ್ಪದೀ ಕಾವ್ಯಗಳಲ್ಲಿ ಉಪಯೋಗಿಸಿದ ಕನ್ನಡವನ್ನು ನಡುಗನ್ನಡವೆನ್ನಬಹುದು. ಪಂಪಭಾರತ, ಗದಾಯುದ್ಧ ಮೊದಲಾದ ಪ್ರಾಚೀನ ಗ್ರಂಥಗಳ ಕನ್ನಡವನ್ನು ಹಳಗನ್ನಡವೆನ್ನಬಹುದು. ಹಿಂದಿನ ಈ ಸಾಹಿತ್ಯ ಗ್ರಂಥಗಳನ್ನು ಓದತಕ್ಕವರಿಗೆ ನೆರವಾಗಲೆಂದು ನಡುಗನ್ನಡ, ಹಳಗನ್ನಡಗಳಿಗೆ ಸಂಬಂಧಿಸಿದಂತೆ ಕೆಲವು ವ್ಯಾಕರಣ ವಿಶೇಷಗಳನ್ನು ಸಂಕ್ಷೇಪವಾಗಿ ಇಲ್ಲಿ ತಿಳಿಸಿದೆ.

### ಹ ಳ ಗ ನ್ನ ಡ - ೧

### ಅಕ್ಷರ ಪ್ರಕರಣ

ಹಿಂದಿನ ಅಕ್ಷರಮಾಲೆಯಲ್ಲಿ ಱ,ೞ ಎಂಬೆರಡು ಅಕ್ಷರಗಳು ಅಧಿಕವಾಗಿದ್ದವು. ಈಗ 'ಱ' ಕ್ಕೆ ಬದಲಾಗಿ 'ರ'ವೂ 'ೞ'ಕ್ಕೆ ಬದಲಾಗಿ 'ಳ'ವೂ ಬಳಕೆಗೆ ಬಂದಿವೆ. 'ಱ'ಕ್ಕೆ ಶಕಟರೇಫವೆಂದೂ 'ೞ'ಕ್ಕೆ ರಳವೆಂದೂ ಹೆಸರು. ಇವುಗಳ ಉಚ್ಚಾರಣೆ ಕ್ರಮವಾಗಿ ರೇಫ ಮತ್ತು ಳಕಾರಗಳಿಗೆ ಸಮೀಪದಾಗಿದ್ದಿರಬೇಕು. ನಿರ್ದಿಷ್ಟವಾಗಿ ತಿಳಿಯದು. ಅಚ್ಚಗನ್ನಡ ಶಬ್ದಗಳಲ್ಲಿರುವ 'ಳ'ಕ್ಕೆ ಕುಳವೆಂದೂ ಸಂಸ್ಕೃತ ಶಬ್ದಗಳಲ್ಲಿರುವ 'ಲ'ಕ್ಕೆ ಪ್ರತಿಯಾಗಿ ಬಂದಿರುವ 'ಳ'ಕ್ಕೆ ಕ್ಷಳವೆಂದೂ ಸಂಜ್ಞೆಯಿದೆ.

ಉದಾ : ೧. ಶಕಟರೇಫ - ಕೆದಱು (ಕೆದರು), ತೋಱು (ತೋರು)

೨. ರಳ - ಕೊೞ (ಕೊಳೆ), ತುೞ (ತುಳಿ)

೩. ಕುಳ - ಬೆಳೆ, ತಿಳಿ

೪. ಕ್ಷಳ - ನಳಿನ, ತಾಳ

ಱ,ೞಗಳು ಹಳಗನ್ನಡದಲ್ಲಿ ಮುಖ್ಯವಾದವು. ಅವುಗಳ ವ್ಯತ್ಯಾಸದಿಂದ ಅರ್ಥವೇ ಬದಲಾಗಬಹುದು.

ಉದಾ: ಅರಿ = ಕತ್ತರಿಸು - ಅಱಿ = ತಿಳಿ

ಒರೆ = ಉಜ್ಜು - ಒಱೆ =ಸ್ರವಿಸು, ಸುರಿ

ಕರೆ = ದಡ - ಕಱೆ = ಕಪ್ಪು

ಬಾಳ್ = ಕತ್ತಿ - ಬಾೞ್ = ಬದುಕು

ಬಾಳೆ = ಮೀನು - ಬಾೞೆ = ಬಾಳೆಯ ಗಿಡ

ಪೊಳೆ = ಪ್ರಕಾಶಿಸು - ಪೊೞೆ = ನದಿ

**ಕೆಲವು ಶಬ್ದರೂಪಗಳು**

೧. ಹಳಗನ್ನಡದಲ್ಲಿ ನ ಣ ಯ ರ ಳ ಱ ೞ ಗಳು ಅಂತ್ಯದಲ್ಲಿರುವ **ವ್ಯಂಜನಾಂತ** ಶಬ್ದಗಳಿಗೆ ಹೊಸಗನ್ನಡದಲ್ಲಿ ಸಾಮಾನ್ಯವಾಗಿ ಉಕಾರವು ಸೇರಿ ಅವು ಸ್ವರಾಂತಗಳಾಗುತ್ತವೆ. ಲ, ೞಗಳಿಗೆ ಳಕಾರವೂ ಱ ಕ್ಕೆ ರೇಫವೂ ಬರುತ್ತವೆ. ಪಕಾರವು ಹಕಾರವಾಗುತ್ತದೆ.

ಉದಾ : ಪೊನ್, ಜೇನ್ = ಹೊನ್ನು, ಜೇನು

ಕಣ್, ಪೆಣ್ = ಕಣ್ಣು, ಹೆಣ್ಣು

ಕೊಯ್, ಸಾಯ್ = ಕೊಯ್ಯು, ಸಾಯು

ಉಸಿರ್ = ಉಸಿರು

ಬೆರಳ್, ಕೊರಳ್, ಮರಳ್, ಸರಳ್ = ಬೆರಳು, ಕೊರಳು, ಮರಳು, ಸರಳು

ತಿರುಳ್, ಕರುಳ್ = ತಿರುಳು, ಕರುಳು

ಬಸಿಱ್, ಕೆಸಱ್ = ಬಸಿರು, ಕೆಸರು

ಪೊಗೞ್, ಬಾೞ್ = ಹೊಗಳು, ಬಾಳು.

೨. ಹಳಗನ್ನಡದಲ್ಲಿ ರೇಫಸಹಿತವಾದ ಒತ್ತಕ್ಷರಗಳು ಈಗ ಸಜಾತೀಯ ಸಂಯುಕ್ತ ವ್ಯಂಜನಗಳಾಗಿವೆ.

ಉದಾ: ಉರ್ದು, ತಿರ್ದು, ನುರ್ಗು, ತರ್ಗು, ಕುರ್ಗು = ಉದ್ದು, ತಿದ್ದು, ನುಗ್ಗು, ತಗ್ಗು, ಕುಗ್ಗು.

೩. ಅನುಸ್ವಾರಸಹಿತವಾದ ಅನೇಕ ಶಬ್ದಗಳಲ್ಲಿ ಈಗ ಅನುಸ್ವಾರವು ಲುಪ್ತವಾಗಿದೆ.

ಉದಾ: ಬೆಡಂಗು, ಅಡಂಗು, ಮೀಂಟು, ಬೇಂಟೆ = ಬೆಡಗು, ಅಡಗು, ಮೀಟು, ಬೇಟೆ.

೪. ವರ್ತಮಾನಕಾಲದ ಕ್ರಿಯಾಪದಗಳಲ್ಲಿ ಹೆಚ್ಚಿನ ವ್ಯತ್ಯಾಸವಾಗಿದೆ.

ಉದಾ: ಬರ್ಕುಂ = ಬರುತ್ತಾನೆ, ಬರುತ್ತಾಳೆ, ಬರುತ್ತದೆ.

ಪೇಳ್ಗುಂ = ಹೇಳುತ್ತಾನೆ, ಹೇಳುತ್ತಾಳೆ, ಹೇಳುತ್ತದೆ.

೧. ಕೋಲ್ - ಕೋಲು
ಆಳ್ - ಆಳು
ಊರ್ - ಊರು
ಪೇಳ್ - ಹೇಳು
ಪವಣ್ - ಹವಣು

೨. ಪುಲ್- ಹುಲ್ಲು
ಪೊನ್ - ಹೊನ್ನು
ತಿನ್ - ತಿನ್ನು
ನಿಲ್- ನಿಲ್ಲು

೩. ಬಾಯ್- ಬಾಯಿ
ತಾಯ್ - ತಾಯಿ
ನಾಯ್ - ನಾಯಿ
ಕಾಯ್ - ಕಾಯಿ

೪. ಪಾಲ್ - ಹಾಲು
ಪಾವು - ಹಾವು
ಪಳದು - ಹಳದು
ಪಸಿವು - ಹಸಿವು
ಪಕ್ಕಿ - ಹಕ್ಕಿ
ಪಗೆ - ಹಗೆ

೫. ಪರ್ಬು = ಹಬ್ಬು
ಕರ್ಬು = ಕಬ್ಬು
ಕಳ್ತೆ = ಕತ್ತೆ
ಎಳ್ಚರು = ಎಚ್ಚರ
ಪೊಣ್ಮು - ಹೊಮ್ಮು
ಎಳ್ತರ = ಎತ್ತರ

೬. ಬರ್ದುಕು. ಬರ್ದುಂಕು = ಬದುಕು
ಕಿಮುಳ್ಚು = ಕಿವುಚು
ನಾಣ್ಚು = ನಾಚು
ಬೇಳ್ಕುಂ = ಬೇಕು
ಇರುಂಬೆ = ಇರುವೆ
ಅಹಗೆ = ಹಾಗೆ
ಇಹಗೆ = ಹೀಗೆ
ಎಹಗೆ = ಹೇಗೆ
ಅವುಂಕು = ಔಕು
ಕವುಂಕಲ್ = ಕಂಕುಳು
ಪೊಸಂತಿಲ್ = ಹೊಸ್ತಿಲು
ಪೆರ್ಮೆ = ಹೆಮ್ಮೆ
ಬಾರ್ಚು = ಬಾಚು
ಅಣ್ಮು = ಹಮ್ಮು

೭. ಸಂಸ್ಕೃತ ಮೂಲಗಳಿಂದ ಬಂದ ತದ್ಭವಗಳು.

| ಸಂಸ್ಕೃತ | ಹಳಗನ್ನಡ | ಸಂಸ್ಕೃತ | ಹಳಗನ್ನಡ |
|---|---|---|---|
| ಆಕಾಶ | ಆಗಸ | ದುಕೂಲ | ದುಗುಲ |
| ಶಾಣ | ಸಾಣೆ | ಗೋಷ್ಠೀ | ಗೊಟ್ಟಿ |
| ಪಶು | ಪಸು | ಸ್ವರ್ಗ | ಸಗ್ಗ |
| ಋಣ | ರಿಣ | ನಿಷ್ಠಾ | ನಿಟ್ಟೆ |

ಋಷಿ - ರಿಸಿ
ಮೃಗ- ಮಿಗ
ಶೃಂಖಲಾ - ಸಂಕಲೆ
ಮುಖ - ಮುಕ, ಮೊಗ
ಧಾರಾ - ದಾರೆ
ಜಾತಿ - ಜಾದಿ, ಜಾಜಿ
ಕಪಿಲಾ - ಕಪಿಲೆ (ಹಸು)
ಶಿಬಕಾ - ಸಿವಿಗೆ
ವಸತಿ - ಬಸದಿ
ಶ್ರಮಣ - ಸವಣ
ಧ್ಯಾನ - ಜಾನ
ವ್ಯಾಘ್ರ - ಬಗ್ಗ
ಉದ್ಯೋಗ - ಉಜ್ಜುಗ
ವಿದ್ಯಾ - ಬಿಜ್ಜೆ
ವೈದ್ಯ - ಬೆಜ್ಜ
ಅಕ್ಷರ - ಅಕ್ಕರ
ಭಿಕ್ಷಾ - ಬಿಕ್ಕೆ
ಕ್ಷೇಮ - ಸೇಮ
ಪರೀಕ್ಷಾ - ಪರಿಕೆ
ಪುಸ್ತಕ- ಪೊತ್ತಗೆ, ಹೊತ್ತಗೆ
ರಾಕ್ಷಸ - ರಕ್ಕಸ
ತಾಂಬೂಲ - ತಂಬುಲ
ಸ್ಫಟಿಕ - ಪಳಿಗೆ
ಅನ್ಯಾಯ - ಅನ್ನೆಯ
ಸಾಹಸ - ಸಾಸ
ಅಮೃತ - ಅಮರ್ದು
ಅಂತಃಪುರ - ಅಂತವುರ
ಸ್ಥಲ - ತಳ
ದ್ವಿಗುಣ - ದುಗುಣ
ತ್ರಿಪದೀ - ತಿವದಿ
ಸಹವಾಸೀ - ಸಾವಾಸಿ
ಮಹಾದೇವ - ಮಾದೇವ
ನಾರಾಯಣ - ನಾರಯಣ
ವಿಸ್ತಾರ - ಬಿತ್ತಾರ
ಹಂಸ - ಅಂಚೆ
ವೃತ್ತ - ಬಟ್ಟ
ಯಜ್ಞ - ಜನ್ನ
ಸಾಕ್ಷೀ - ಸಕ್ಕಿ
ಶಯ್ಯಾ - ಸೆಜ್ಜೆ
ತ್ವರಿತ - ತುರಿಹ
ಅಶ್ರದ್ಧಾ - ಅಸಡ್ಡೆ
ನೂಪುರ - ನೇವುರ
ಪ್ರತಿ - ಪಡಿ
ಸ್ಥಾನ - ಠಾಣ
ಕಾರ್ಯ - ಕಜ್ಜ
ಸ್ನೇಹ - ನೇಹ
ಚರ್ಮ- ಚಮ್ಮ
ನಿತ್ಯ - ನಿಚ್ಚ
ಆರಾಮ - ಆರವೆ
ಶೀರ್ಷಕ - ಸೀಸಕ
ಬ್ರಹ್ಮ - ಬೊಮ್ಮ
ಪ್ರಜ್ವಲ - ಪಜ್ಜಳ
ಮೃತ್ಯು - ಮಿಳ್ತು
ಕಾವ್ಯ - ಕಬ್ಬ

| | |
|---|---|
| ಕ್ಷೀರಾಗಾರ - ಕೀಲಾರ | ಕವಿ - ಕಬ್ಬಿಗ |
| ಕ್ರೌಂಚ - ಕೊಂಚೆ | ತೈಲಿಕ - ತೆಲ್ಲಿಗ |
| ವೀರ<br>ವೀರ್ಯ - ಬೀರ | ದೃಷ್ಟಿ -ದಿಟ್ಟಿ<br>ಲಕ್ಷ್ಮಿ - ಲಕುಮಿ |
| ಪತಿವ್ರತೆ - ಹದಿಬದೆ | ಯಮುನಾ - ಜಮುನೆ |
| ರಕ್ಷಾ - ರಕ್ಕೆ | ಭಕ್ತಿ - ಬಕುತಿ |
| ಲಕ್ಷ - ಲಕ್ಕ | ಮನುಷ್ಯ - ಮಾನಿಸ |

**ವಚನ**

ಬಹುವಚನವನ್ನು ಸೂಚಿಸಲು ಪ್ರಾತಿಪದಿಕಗಳ ಮುಂದೆ ಬರುವ ಪ್ರತ್ಯಯಗಳಿವು- ಗಳ್, ಕಳ್, ಅರ್, ಇರ್, ದಿರ್, ಏರ್.

| | | | | | |
|---|---|---|---|---|---|
| ಗಳ್ | ಮರಂ | ಮರಂಗಳ್ | ಅರ್ | ದೇವನ್ | ದೇವರ್ |
| | ಗುರು | ಗುರುಗಳ್ | | ಅರಸನ್ | ಅರಸರ್ |
| | ಅಣ್ಣನ್ | ಅಣ್ಣಂಗಳ್ | ಇರ್ | ತೊೞ್ತು | ತೊೞ್ತಿರ್ |
| ಕಳ್ | ಅಕ್ಕನ್ | ಅಕ್ಕಂಗಳ್ | ದಿರ್ | ಇವನ್ | ಇವಂದಿರ್ |
| | ಮಗು | ಮಕ್ಕಳ್ | | ಅವನ್ | ಅವಂದಿರ್ |
| | ನಾಡು | ನಾಟ್ಕಳ್ | ಏರ್ | ತಾಯ್ | ತಾಯ್ವಿರ್ |
| | ಆವು | ಆಕಳ್ | | ಅತ್ತೆ | ಅತ್ತೆವಿರ್ |

೧. ಅರ್ ಮುಂತಾದ ಪ್ರತ್ಯಯಗಳ ಮುಂದೆ ಮತ್ತೆ ಗಳ್, ಕಳ್ ಪ್ರತ್ಯಯಗಳು ಸೇರುವುದುಂಟು.

ಉದಾ: ದೇವರ್ಗಳ್, ಇವಂದಿರ್ಗಳ್, ತಾಯ್ವಿರ್ಗಳ್, ದೇವಿಯರ್ಕಳ್.

೨. ನಪುಂಸಕಲಿಂಗದ ಶಬ್ದಗಳ ಮುಂದೆ ಗಳ್, ಕಳ್ ಪ್ರತ್ಯಯಗಳು ಮಾತ್ರ ಬರುತ್ತವೆ.

ಉದಾ : ವನಂಗಳ್, ಬೆಳ್ಳಿಗಳ್, ಮಕ್ಕಳ್

೩. ಸಂಖ್ಯಾವಾಚಕ, ಪರಿಮಾಣವಾಚಕಗಳು ಪುಂಸ್ತ್ರೀಲಿಂಗಗಳಲ್ಲಿ ಹೀಗೆ ರೂಪಗಳನ್ನು ಪಡೆಯುತ್ತವೆ.

ಇರ್ವರ್, ಮೂವರ್, ನಾಲ್ವರ್ (ಸಂಖ್ಯಾ)

ಎಲ್ಲವರ್, ಅನಿಬರ್, ಇನಿಬರ್ (ಪರಿಮಾಣ)

೪. ಪಲವು, ಕೆಲವು ಎಂಬ ಶಬ್ದಗಳಿಗೆ ಪುಂಸ್ತ್ರೀಲಿಂಗ ಬಹುವಚನದಲ್ಲಿ ಮೂರು ರೂಪಗಳುಂಟು.

ಪಲವು - ಪಲಂಬರ್, ಪಲಬರ್, ಪಲರ್

ಕೆಲವು - ಕೆಲಂಬರ್, ಕೆಲಬರ್, ಕೆಲರ್

**ವಿಭಕ್ತಿ**

ಪ್ರಾತಿಪದಿಕಗಳಿಗೆ ಎರಡು ವಚನಗಳಲ್ಲಿಯೂ ಕೆಳಗೆ ಕಂಡಂತೆ ವಿಭಕ್ತಿ ಪ್ರತ್ಯಯಗಳು ಸೇರುತ್ತವೆ.

| | |
|---|---|
| ಪ್ರಥಮಾ | ಮ್ (ನ್) |
| ಸಂ.ಪ್ರ. | ಎ, ಆ |
| ದ್ವಿ. | ಅಂ |
| ತೃ. | ಇಂ, ಇಂದಂ, ಇಂದೆ, ಎ |
| ಚ. | ಗೆ, ಕೆ, ಕ್ಕೆ |
| ಪಂ. | ಅತ್ತಣಿಂ, ಅತ್ತಣಿಂದಂ, ಅತ್ತಣಿಂದೆ |
| ಷ. | ಅ |
| ಸ. | ಒಳ್, ಅಲಿ |

ಉದಾ : ೧. ಅರಸ

| | ಏ.ವ | ಬ.ವ |
|---|---|---|
| ಪ್ರ. | ಅರಸಂ, ಅರಸನ್ | ಅರಸರ್, ಅರಸರ್ಗಳ್, ಅರಸರ್ಕಳ್ |
| ಸಂ. | ಅರಸನೆ, ಅರಸಾ | ಅರಸರೆ, ಅರಸರ್ಗಳೆ |
| ದ್ವಿ. | ಅರಸನಂ | ಅರಸರಂ, ಅರಸರ್ಗಳಂ |
| ತೃ. | ಅರಸನಿಂ, ಅರಸನಿಂದಂ, ಅರಸನಿಂದೆ | ಅರಸರಂ, ಅರಸರಿಂದಂ, ಅರಸರಿಂದೆ |
| ಚ. | ಅರಸಂಗೆ | ಅರಸರ್ಗೆ, ಅರಸರ್ಗಳ್ಗೆ |
| ಪ. | ಅರಸನತ್ತಣಿಂ<br>ಅರಸನತ್ತಣಿಂದಂ<br>ಅರಸನತ್ತಣಿಂದೆ | ಅರಸರತ್ತಣಿಂ<br>ಅರಸರ್ಗಳತ್ತಣಿಂ<br>ಅರಸರ್ಗಳತ್ತಣಿಂದೆ |
| ಷ. | ಅರಸನ | ಅರಸರ |
| ಸ. | ಅರಸನೊಳ್, ಅರಸನಲಿ | ಅರಸರೊಳ್, ಅರಸರಲಿ |

**ವಿಶೇಷ.**

೧. ಸಂಬೋಧನ ವಿಭಕ್ತಿಯಲ್ಲಿ ಕೆಳಗೆ ಕಂಡ ರೂಪವಿಶೇಷಗಳನ್ನು ಗಮನಿಸಬೇಕು.

| ಏ.ವ. | ಬ.ವ |
|---|---|
| ದೇವ, ದೇವಾ, ದೇವನೆ, ದೇವನೇ | ದೇವರೆ, ದೇವರೇ, ಬುಧರಿರ, ಬುಧರಿರಾ |
| ಅಭಿಮನ್ಯು, ಅಭಿಮನ್ಯೂ | ದೇವಿಯರ್ಕಳಿರ, ದೇವಿಯರ್ಕಳಿರಾ |
| ನಂದನಮೆ, ತಾವರೆಯೇ | |

೨. ತೃತೀಯಾವಿಭಕ್ತಿಯ ಎ ಪ್ರತ್ಯಯವೂ ಚತುರ್ಥಿಯ ಕೆ, ಕ್ಕೆ ಗಳೂ ಅಕಾರಾಂತ ನಪುಂಸಕಲಿಂಗದ ಏಕವಚನದಲ್ಲಿ ಮಾತ್ರ ಪ್ರಯೋಗಿಸಲ್ಪಡುತ್ತವೆ.

ಉದಾ : ಎ - ನೆಲದೆ, ಮರದೆ, ಕ್ರಮದೆ.

ಕೆ, ಕ್ಕೆ- ನೆಲಕೆ, ನೆಲಕ್ಕೆ ಇತ್ಯಾದಿ.

೩. ದ್ವಿತೀಯಾವಿಭಕ್ತಿಯಲ್ಲಿ ನೆಲನಂ- ನೆಲಮಂ, ಕೊಳನಂ-ಕೊಳಮಂ ಎಂಬ ಪ್ರಯೋಗಗಳೂ ಉಂಟು.

## ೨. ಆನ್ ( ನಾನು)

| | ಏ.ವ | ಬ.ವ |
|---|---|---|
| ಪ್ರ. | ಆನ್ | ಆಂ |
| ದ್ವಿ. | ಎನ್ನಂ | ಎಮ್ಮಂ |
| ತೃ. | ಎನ್ನಿಂ, ಎನ್ನಿಂದಂ ಎನ್ನಿಂದೆ | ಎಮ್ಮಿಂ, ಎಮ್ಮಿಂದಂ ಎಮ್ಮಿಂದೆ |
| ಚ. | ಎನಗೆ | ಎಮಗೆ |
| ಪಂ. | ಎನ್ನತ್ತಣಿಂ | ಎಮ್ಮತ್ತಣಿಂ |
| ಷ. | ಎನ್ನ | ಎಮ್ಮ |
| ಸ. | ಎನ್ನೊಳ್ | ಎಮ್ಮೊಳ್ |

**ವಿಶೇಷ**

ಈ ರೂಪವಿಶೇಷಗಳನ್ನು ಗಮನಿಸಬೇಕು.

೧. ನಿನತು, ನಿನತ್ತು (ನಿನ್ನದು) ನಿಮತು, ನಿಮತ್ತು (ನಿಮ್ಮದು)
ಎನತು, ಎನತ್ತು (ನನ್ನದು); ನಮತು, ನಮತ್ತು (ನಮ್ಮದು)
ತನತು, ತನತ್ತು (ತನ್ನದು); ತಮತು, ತಮತ್ತು (ತಮ್ಮದು)

೨. ನಿಮ್ಮ + ಇರ್ವರ್ = ನಿಮ್ಮುತ್ರಿರ್ವರ್, ನಿಮ್ಮುತ್ರೈವರ್

ಎಮ್ಮ + ಇರ್ವರ್ = ಎಮ್ಮುತ್ರಿರ್ವರ್, ಎಮ್ಮುತ್ರೈವರ್

ತಮ್ಮ + ಆರ್ವರ್ = ತಮ್ಮುತ್ರಾರ್ವರ್, ತಮ್ಮುತ್ರೇೞ್ವರ್ ಇತ್ಯಾದಿ.

## ಕ್ರಿಯಾಪದ ಪ್ರಕರಣ

ಧಾತುಗಳಿಗೆ ವರ್ತಮಾನ ಭೂತ ಭವಿಷ್ಯತ್ಕಾಲಗಳಲ್ಲಿ ಕೆಳಗೆ ಕಂಡಂತೆ ಆಖ್ಯಾತಪ್ರತ್ಯಯಗಳು ಹತ್ತುತ್ತವೆ.

| ಪ್ರ.ಪು | | ಏ.ವ. | ಬ.ವ |
|---|---|---|---|
| | ಪು. | ಅನ್, ಅಂ | ಅರ್ |
| | ಸ್ತ್ರೀ. | ಅಳ್ | ಅರ್ |
| | ನ. | ಉದು | ಉವು |
| ಮ.ಪು. | | ಅಯ್ | ಇರ್ |
| ಪ್ರ.ಪು. | | ಎನ್, ಎಂ | ಎವು |

### ೧. ವರ್ತಮಾನ ಕಾಲ

ವರ್ತಮಾನಕಾಲದಲ್ಲಿ ಧಾತುವಿಗೆ ಈ ಆಖ್ಯಾತಪ್ರತ್ಯಯಗಳು ಸೇರುವಾಗ ನಡುವೆ 'ದಪ' ಎಂಬ ವಿಕರಣ ಬರುತ್ತದೆ. ಆಗ ಧಾತುವಿಗೆ ಆದೇಶಾದಿ ವಿಕಾರಗಳಾಗುತ್ತದೆ.

| ಉದಾ : | | ಏ.ವ | ಬ.ವ |
|---|---|---|---|
| ಪ್ರ.ಪು | ಪು. | ನುಡಿದಪನ್, ನುಡಿದಪಂ | ನುಡಿದಪರ್ |
| | ಸ್ತ್ರೀ. | ನುಡಿದಪಳ್ | ನುಡಿದಪರ್ |
| | ನ. | ನುಡಿದಪುದು | ನುಡಿದಪುವು |
| ಮ.ಪು. | | ನುಡಿದಪಯ್ | ನುಡಿದಪಿರ್ |
| ಉ.ಪು. | | ನುಡಿದಪೆನ್, ನುಡಿದಪೆಂ | ನುಡಿದಪೆವು |

ಹೀಗೆಯೇ ಮಾಡಿದಪನ್, ಕೇಳ್ದಪನ್ ಇತ್ಯಾದಿ.

೧. ಬಲ್, ಉಳ್, (ಇರು)- ಈ ಧಾತುಗಳಿಗೆ ಯಾವ ವಿಕರಣವೂ ಬರುವುದಿಲ್ಲ. ಲಕಾರ ಮತ್ತು ಳಕಾರಗಳಿಗೆ ದ್ವಿತ್ವ ಬರುತ್ತದೆ.

ಉದಾ : ಬಲ್ಲನ್, ಬಲ್ಲರ್; ಉಳ್ಳನ್, ಉಳ್ಳರ್

೨. ಉಳ್ ಧಾತುವಿನ ನಪುಂಸಕ ಪ್ರಥಮೈಕವಚನ ಉಂಟು. ಉಳಿದೆಡೆ ಒಳವು, ಒಳಯ್, ಒಳೆನ್ ಇತ್ಯಾದಿ. ಇಲ್ಲಿ ಳಕಾರಕ್ಕೆ ದ್ವಿತ್ವವಿಲ್ಲ.

೩. ಪ್ರಥಮ ಪುರುಷದಲ್ಲಿ ಎಲ್ಲ ಕಾಲ ವಚನ ಲಿಂಗಗಳಲ್ಲಿಯೂ ಧಾತುಗಳಿಗೆ **ಗುಂ, ಗುಗುಂ** ಅಥವಾ **ಕುಂ** ಎಂಬ ಆಖ್ಯಾತಪ್ರತ್ಯಯಗಳು ವಿಕಲ್ಪವಾಗಿ ಬರುತ್ತವೆ. ಆಗ ವಿಕರಣಪ್ರತ್ಯಯ ಬರುವುದಿಲ್ಲ.

ಉದಾ : ಅವನ್ ಗೆಲ್ಗುಂ, ಗೆಲ್ಗುಗುಂ

ಅವಳ್ ಇರ್ಕುಂ

ಅವು ಬರ್ಕುಂ

ಹೀಗೆಯೇ ಮಾಡುಗುಂ, ಉಲಿಗುಂ, ಪೋಕುಂ, ಪೋಗುಗುಂ ಇತ್ಯಾದಿ.

೪. **ಕುಂ** ಎಂಬುದಕ್ಕೆ ದ್ವಿತ್ವವೂ ಬರುವುದುಂಟು.

ಉದಾ : ರಂಜಿಕ್ಕುಂ, ರಂಜಿಕುಂ; ಪಾಲಿಕ್ಕುಂ, ಪಾಲಿಕುಂ

**೨. ಭೂತಕಾಲ**

ಭೂತಕಾಲದಲ್ಲಿ ವಿಕರಣ ಬರುತ್ತದೆ. ಹೊಸಗನ್ನಡದಲ್ಲಿರುವಂತೆ ಧಾತುವಿಗೆ ನಾನಾ ವಿಕಾರಗಳೂ ಆಗುತ್ತವೆ.

ಉದಾ : ನೋಡಿದನ್, ಮಾಡಿದರ್, ಕಂಡಂ, ನೊಂದಂ, ಬೆಂದಂ, ಎಚ್ಚಂ, ನಕ್ಕಂ ಇತ್ಯಾದಿ.

ಪ್ರಥಮ ಪುರುಷದ ನಪುಂಸಕಲಿಂಗದ ಏಕವಚನದಲ್ಲಿ **ಉದು** ಎಂಬುದಕ್ಕೆ ಬದಲಾಗಿ **ಇತು, ಇತ್ತು, ಅತ್ತು** ಎಂಬ ಪ್ರತ್ಯಯಗಳು ಬರುವುದುಂಟು.

ಉದಾ : ಮುಟ್ಟಿದುದು, ಮುಟ್ಟಿತು, ಮುಟ್ಟಿತ್ತು; ಇರ್ದತ್ತು; ಪೋದತ್ತು.

**೩. ಭವಿಷ್ಯತ್ಕಾಲ**

ಭವಿಷ್ಯತ್ಕಾಲದಲ್ಲಿ **ವ** ಎಂಬ ವಿಕರಣ ಬರುತ್ತದೆ. ಇದಕ್ಕೆ ಕೆಲವೆಡೆಗಳಲ್ಲಿ **ಪ** ಅಥವಾ **ಬ** ಗಳು ಆದೇಶವಾಗುತ್ತವೆ.

ಉದಾ : ನುಡಿವನ್, ಮಾಡುವರ್, ಬರುವಯ್,

ತರಿಸುವನ್, ಪೋಗುವನ್; ತರಿಪರ್, ಪೋಪರ್

ತಿಂಬನ್, ಎಂಬನ್, ಉಣ್ಬರ್.

**೪. ವಿಧ್ಯರ್ಥಕ**

ವಿಧಿ, ಪ್ರಾರ್ಥನೆ- ಮುಂತಾದ ಅರ್ಥಗಳಲ್ಲಿ ಕೆಳಗೆ ಕಂಡಂತೆ ಆಖ್ಯಾತ ಪ್ರತ್ಯಯಗಳು ಧಾತುಗಳಿಗೆ ಸೇರುತ್ತವೆ.

| ಉದಾ : | ಏ.ವ. | ಬ.ವ |
|---|---|---|
| ಪ್ರ.ಪು.(ಎಲ್ಲ ಲಿಂಗಗಳಲ್ಲಿ) | ಗೆ,ಕೆ,ಉದು | ಉದು |
| ಮ.ಪು | (ಇಲ್ಲ), ಅ | ಇಂ, ಉದು |
| ಉ.ಪು | ವೆನ್ | ವಂ |

| ಉದಾ: | ಏ.ವ | ಬ.ವ |
|---|---|---|
| ಪ್ರ.ಪು. | ಪೋಗುಗೆ, ಪೋಕೆ, ಪೋಗುವುದು | ಪೋಗುವುದು |
| ಮ.ಪು. | ಪೋಗು, ಪೋಗ | ಪೋಗಿ, ಪೋಗುವುದು |
| ಉ.ಪು. | ಪೋಗುವೆನ್ | ಪೋಗುವಂ |

**೫. ನಿಷೇಧಾರ್ಥಕ**

ಹೊಸಗನ್ನಡದಂತೆ ಧಾತುವಿಗೂ ಕಾಲಾರ್ಥಕ ಆಖ್ಯಾತಪ್ರತ್ಯಯಕ್ಕೂ ನಡುವೆ **ಅ** ಎಂಬುದು ಸೇರುತ್ತದೆ.

ಉದಾ: ಮಾಡದು, ಮಾಡವು; ತಾರನ್, ಬಾರಂ.

ನಿಷೇಧಾರ್ಥದಲ್ಲಿ ವಿಧಿಯು ತೋರಿದರೆ ಆದರ ಮಧ್ಯಮ ಪುರುಷೈಕವಚನದಲ್ಲಿ **ಅಲ್** ಎಂಬುದೂ ಬಹುವಚನದಲ್ಲಿ ಅಲಿಂ ಎಂಬುದೂ ಬರುತ್ತವೆ.

ಉದಾ : ಬನಮಂ ಪುಗಲ್ ( ವನವನ್ನು ಪ್ರವೇಶಿಸಬೇಡ)

ನೀಮಿದಂ ನಂಬಲಿಂ (ನೀವು ಇದನ್ನು ನಂಬಬೇಡಿರಿ)

## ಅವ್ಯಯ ಪ್ರಕರಣ

**೧. ಸಾಮಾನ್ಯಾವ್ಯಯಗಳು**

ಅಲ್ಲಂ, ಅಲ್ಲ, ಅಲ್ತು; ಇಲ್ಲಂ, ಇಲ್ಲ; ಗಡಂ, ಗಡ,ಗಡಾ; ಬಟಿಕೆ, ಬಟಿಕ್ಕೆ, ಬಟಿಕಂ, ಬಟಿಯಂ; ಮೇಣ್, ವಲಂ, ಕರಂ, ಅಣಂ, ಐದೆ, ಸಲೆ, ಎಮ-ಇತ್ಯಾದಿ.

೨. ತದ್ಧಿತಾಂತಾವ್ಯಯಗಳು

೧. ಸಾದೃಶ್ಯಾರ್ಥದಲ್ಲಿ ಷಷ್ಠ್ಯಂತನಾಮಪದಗಳ ಮೇಲೆ ಅಂತೆ, ಅಂತಿರೆ, ವೊಲ್, ವೋಲ್, ಬೊಲ್, ಅಂತೆವೊಲ್, ಅಂತೆವೋಲ್, ಅಂತಿರೆವೋಲ್ ಎಂಬ ಪ್ರತ್ಯಯಗಳು ಬರುತ್ತವೆ.

ಉದಾ : ಸಿಂಗದಂತೆ, ಚಂದ್ರನಂತಿರೆ, ಹರಿಯವೊಲ್, ಗಿರಿಯವೊಲ್, ಬೆಟ್ಟದಂತೆವೊಲ್ ಇತ್ಯಾದಿ.

ಷಷ್ಠೀ ಪ್ರತ್ಯಯ ಬಾರದಿರುವುದೂ ಉಂಟು,

ಉದಾ : ಹರಿವೊಲ್, ಚಂದ್ರಂಬೊಲ್.

೨. ಸಂಖ್ಯಾವಾಚಕಗಳ ಮೇಲೆಕ್ರಿಯೆಯ ಆವೃತ್ತಿ ತೋರುವಾಗ **ಮೆ** ಸೇರುವುದು.

ಉದಾ : ಒರ್ಮೆ, ಇರ್ಮೆ, ಸಾಸಿರ್ಮೆ

**೩. ಕೃದಂತಾವ್ಯಯಗಳು**

ಕೆಳಗಿನ ಪಟ್ಟಿಯಲ್ಲಿ ಕೆಲವು ಕೃದಂತಾವ್ಯಯಗಳ ಪರಿಚಯವನ್ನು ಮಾಡಿ ಕೊಡಲಾಗಿದೆ.

| ಹಳಗನ್ನಡ | ಹೊಸಗನ್ನಡ |
|---|---|
| ೧. ಮಾಡುತುಂ, ಮಾಡುತ್ತುಂ ಮಾಡುತೆ, ಮಾಡುತ್ತೆ | ೧. ಮಾಡುತ್ತ |
| ೨. ಗೆಲಲ್, ಗೆಲ್ಲಲ್ಕೆ | ೨. ಗೆಲ್ಲಲು, ಗೆಲ್ಲುವುದಕ್ಕೆ |
| ೩. ಪಾಡಲ್ ಅರ್ಹಂ, ಇರಲ್ ಆಗದು | ೩. ಹಾಡಲು ಅರ್ಹ, ಇರಲು ಆಗದು |
| ೪. ಕಡೆದೊಡೆ, ತೀಡುವೊಡೆ | ೪. ಕಡೆದರೆ, ತೀಡಿದರೆ |
| ೫. ಬರ್ಪನ್ನಂ, ಬರ್ಪಿನೆಗಂ | ೫. ಬರುವವರೆಗೆ |

## ನಡುಗನ್ನಡ -೨

ಷಟ್ಪದೀಕಾವ್ಯಗಳಲ್ಲಿ ಕಂಡುಬರುವ ನಡುಗನ್ನಡದಲ್ಲಿ ಕೆಲವು ಹಳಗನ್ನಡದ ರೂಪಗಳೂ ಕೆಲವು ಹೊಸಗನ್ನಡದ ರೂಪಗಳೂ ಬಳಕೆಯಾಗಿವೆ. ನಡುಗನ್ನಡದ ಕೆಲವು ಶಬ್ದವಿಶೇಷಗಳನ್ನು ಇಲ್ಲಿ ಗುರುತಿಸಲಾಗಿದೆ.

### ನಾಮಪದ

**ಪ್ರಥಮಾ**

(ಅ) ಸರ್ವನಾಮಗಳು.

ನಾನು-ನಾ, ನಾವು-ನಾವ್ ಯಾವನು - ಆವನು | ಯಾರು- ಆರು

ನೀನು-ನೀ, ನೀವು-ನೀವ್ ಯಾವಳು - ಆವಳು |

ತಾನು-ತಾ, ತಾವು-ತಾವ್ ಯಾವುದು- ಆವುದು, ಯಾವುವು-ಆವುವು

ಎಮಗೆ- ಎವಗೆ, ನಿಮಗೆ-ನಿವಗೆ, ತಮಗೆ-ತವಗೆ, ಅವನಿಗೆ-ಅವಗೆ

(ಆ) ಅಕಾರಾಂತಕ್ಕೆ **ದಿರು** ಪ್ರತ್ಯಯವು ಬಹುವಚನದಲ್ಲಿ ಸೇರುವುದುಂಟು.

ಉದಾ : ಅಣ್ಣದಿರು, ತಮ್ಮದಿರು

**ದ್ವಿತೀಯಾ**

'ಅನ್ನು' ಪ್ರತ್ಯಯವು 'ಅನು' ಎಂಬ ರೂಪವನ್ನು ತಾಳಬಹುದು.

ಉದಾ: ರಾಮನನು, ಮರವನು, ನನ್ನನು, ಹೊಳೆಗಳನು

**ತೃತೀಯಾ**

ನಪುಂಸಕಲಿಂಗದ ತೃತೀಯೈಕವಚನದಲ್ಲಿ 'ದಿಂ' ಎಂಬುದರ ಅನುಸ್ವಾರಕ್ಕೆ ಲೋಪವಾಗುವುದುಂಟು.

ಉದಾ: ಮರದಿ, ವನದಿ, ನೆಲದಿ

**ಚತುರ್ಥೀ**

ಮುಂದಕ್ಕೆ-ಮುಂದಕೆ, ಹಿಂದಕ್ಕೆ- ಹಿಂದಕೆ

ಒಳಗಣ್ಗೆ, ಒಳಯಿಂಕೆ! ಕೆಳಗಣ್ಗೆ, ಕೆಳಯಿಂಕೆ

**ಸಪ್ತಮೀ**

ರಾಮನೊಳು, ರಾಮನಲಿ; ಗುರುವಿನೊಳು, ಗುರುವಿನಲಿ.

ಅಕಾರಾಂತ ನಪುಂಸಕದಲ್ಲಿ - ನೆಲದೊಳು, ನೆಲದಲಿ, ನೆಲದೆ, ನೆಲದಿ.

(ಅ) ದಿಗ್ವಾಚಕಗಳಿಗೆ ಅಣಾಗಮ...

ಮುಂದಣ, ಹಿಂದಣ, ಒಳಗಣ, ಹೊರಗಣ, ಅತ್ತಣ, ಇತ್ತಣ, ಎತ್ತಣ.

**ಕ್ರಿಯಾಪದ**

(ಅ) ಹೊಸ ಧಾತುಗಳು-

ಹಾರೈಸು, ಹಾರಯಿಸು; ಸೂಳೈಸು, ಸೂಳವಿಸು; ಮೇಳೈಸು, ಮೇಳವಿಸು ಇತ್ಯಾದಿ.

ಅರಿಪು, ಅರುಹು; ಕಳಿವು, ಕಳಹು ಇತ್ಯಾದಿ.

(ಆ) ಹಳಗನ್ನಡದ ಕಡೆಯ ಅನುಸ್ವಾರಕ್ಕೆ ಲೋಪ.

ಉದಾ: ತೋರ್ಕು, ಮಾಡುಗು, ನುಡಿಗು, ಪೋಕು, ಅಕ್ಕು

ಬಂದ, ಪೋದ, ಎಚ್ಚ, ನುಡಿದ

ಬೇಡು ಧಾತುವಿಗೆ ಬೇಳ್ಕು, ಬೇಕು ಎಂಬ ರೂಪಗಳುಂಟು.

ಸಾಲ್ಗುಂ ಎಂಬುದಕ್ಕೆ ಸಾಲ್ಗು, ಸಾಕು ಎಂಬ ರೂಪಗಳುಂಟು.

ಇದ್ದಾನೆ- ಐದಾನೆ, ಇದ್ದಾಳೆ- ಐದಾಳೆ, ಇದ್ದಾರೆ - ಐದಾರೆ, ಐದನೆ, ಐದಳೆ ಎಂದೂ ಇವೆ.

(ಇ) ವಿಧ್ಯರ್ಥಕ

ಪ್ರ.ಪು. ಮಾಡುಗೆ, ಕೇಳುಗೆ, ನಡೆಗೆ

ಮ.ಪು. ಬಹುವಚನ- ಮಾಡಿ, ಕೇಳಿ, ನುಡಿಯಿ

ಉ.ಪು. ಬಹುವಚನ- ಮಾಡುವ, ಪೇಳುವ, ನುಡಿವ.

## ಕೃದಂತ

(ಅ) ಕೃದಂತನಾಮದಲ್ಲಿ ಹೊಸಗನ್ನಡದ **ಉವದ ಉ**ಕಾರಕ್ಕೆ ನಡುಗನ್ನಡದಲ್ಲಿ ಲೋಪ ಬರುತ್ತದೆ.

ಉದಾ: ಕೇಳುವ-ಕೇಳ್ವ, ನಿಲುವ- ನಿಲ್ವ, ಹೊಯ್ಯುವ- ಹೊಯ್ವ

(ಆ) ಕೃದಂತದ ವಕಾರವು ರೂಪಾಂತರಗಳನ್ನು ಹೊಂದುವುದುಂಟು.

ಉದಾ : ಮಾಡುವ - ಮಾಳ್ಪ, ಬೇಡುವ- ಬೇಳ್ಪ, ಹೋಗುವ - ಪೋಪ, ಹೋಹ; ಆಗುವ- ಅಪ್ಪ, ಅಹ; ಇರುವ- ಇರ್ಪ, ಇಪ್ಪ, ಇಹ; ಬರುವ-ಬರ್ಪ, ಬಪ್ಪ, ಬಹ; ತರುವ- ತರ್ಪ, ತಪ್ಪ, ತಹ; ಕೊಳ್ಳುವ- ಕೊಳ್ವ, ಕೊಂಬ, ಅಂತು + ಅಹ = ಅಂತಹ; ಎಂತು + ಅಹ = ಎಂತಹ, ಇಂತು + ಇಹ = ಇಂತಹ (ಇವೆ ಹೊಸಗನ್ನಡದಲ್ಲಿ ಅಂಥ, ಎಂಥ, ಇಂಥ ಆಗಿವೆ).

| ನಡುಗನ್ನಡ | ಹೊಸಗನ್ನಡ |
|---|---|
| ೧. ಬರೆ, ಬರಲ್ಕೆ, ಬರಲಿಕೆ; ನೋಡಲ್ಕೆ ನೋಡಲಿಕೆ. | ೧. ಬರಲು; ನೋಡಲು |
| ೨. ಬರುತ್ತ, ಬರುತೆ, ಬರುತ್ತೆ, ಬರುತುಂ ಬರುತ್ತುಂ; ನೋಡುತ, ನೋಡುತೆ, ನೋಡುತ್ತೆ, ನೋಡುತುಂ, ನೋಡುತ್ತುಂ. | ೨. ಬರುತ್ತ; ನೋಡುತ್ತ |
| ೩. ಬಳಲ್ದು, ಬಳಲಿದು | ೩. ಬಳಲಿ |
| ಕೇಳ್ದು, ಕೇಳಿದು | ಕೇಳಿ |
| ನೋಡಿದು | ನೋಡಿ |
| ಮೆಟ್ಟಿದು | ಮೆಟ್ಟಿ |
| ೪. ಬಂದಡೆ, ಬಂದೊಡೆ | ೪. ಬಂದರೆ |
| ೫. ಬರುವಡೆ, ಬರುವೊಡೆ, ಬರುವರೆ | ೫. ಬರುವುದಾದರೆ |

## ಅವ್ಯಯ

೧. ಮೇಣು = 'ಅಥವಾ, ಮತ್ತು' ಎಂಬ ಅರ್ಥದಲ್ಲಿ

೨. ಅಂ, ಉಂ,ಉ= ಊ (ಸಮುಚ್ಚಯ)

ಉದಾ: ಆದೊಡಂ, ಆದೊಡೆಯಂ, ಆದೊಡೆಯು

೩. ದ್ವಿತೀಯಾವಿಭಕ್ತಿಯ ಹಿಂದೆ **ಉಂ** ಬರುವುದುಂಟು

ಉದಾ: ಎನ್ನುಮಂ= ನನ್ನನ್ನೂ

೪. ಅನ್ನಗಂ, ಅನ್ನೆಗ= ತನಕ, ಅದುವರೆಗೆ

೫. ನೆರೆ, ಉರೆ, ಮಿಗೆ, ಸಲೆ ನಾಡೆ= ಹೆಚ್ಚಾಗಿ, ಬಹಳ.



# ಶಬ್ದಶುದ್ಧಿ - ೩

ಹೊಸಗನ್ನಡದ ಬರವಣಿಗೆಯಲ್ಲಿ ಆಡುಮಾತುಗಳೂ ಸಂಸ್ಕೃತ ಶಬ್ದಗಳ ಅಶುದ್ಧ ರೂಪಗಳೂ ಸೇರಿಕೊಂಡಿವೆ. ಕೆಳಗಿನ ಪಟ್ಟಿಯಲ್ಲಿ ಅಂಥ ಕೆಲವನ್ನು ಸಂಗ್ರಹಿಸಿ ಶುದ್ಧ ರೂಪಗಳನ್ನು ತೋರಿಸಿದೆ. ಇಲ್ಲಿ ಶುದ್ಧ ರೂಪಗಳೆಂದರೆ, ಹೆಚ್ಚು ವಿಕಾರಗೊಳ್ಳದೆ ವ್ಯಾಕರಣಕ್ಕೆ ದೂರವಾಗದಿರುವ ಶಬ್ದರೂಪಗಳು.

| ಅಶುದ್ಧ | ಶುದ್ಧ | ಅಶುದ್ಧ | ಶುದ್ಧ |
|---|---|---|---|
| ಅವನೂನೂ | ಅವನೂ | ಕುಮಾರ್ತಿ | ಕುಮಾರಿ |
| ಅತಿಶಯತೆ | ಅತಿಶಯ | ಕೈಯ್ಯಿಂದ | ಕೈಯಿಂದ |
| ಅಂತರ್ರಾಷ್ಟ್ರೀಯ | ಅಂತಾರಾಷ್ಟ್ರೀಯ | ಗಾಂಭೀರ್ಯತೆ | ಗಾಂಭೀರ್ಯ |
| ಅಧ್ಯಕ್ಷಿಣಿ | ಅಧ್ಯಕ್ಷೆ, ಅಧ್ಯಕ್ಷಳು | ಚತುರೋಪಾಯ | ಚತುರುಪಾಯ |
| ಅಂಗಾಂಗಗಳು | ಅಂಗೋಪಾಂಗಗಳೂ | ಜಾತ್ಯಾತೀತ | ಜಾತ್ಯತೀತ |
| ಆವತ್ತು | ಆ ಹೊತ್ತು, | ಜಿಗುಪ್ಸೆ | ಜುಗುಪ್ಸೆ |
| | ಆವೊತ್ತು | ತಪ್ಪಿತಸ್ಥ | ತಪ್ಪುಗಾರ |
| ಆಧುನಿಕೀಕತೆ | ಆಧುನಿಕೀಕರಣ | ತಪೋಸಾಮರ್ಥ್ಯ | ತಪಃಸಾಮರ್ಥ್ಯ |
| ಆಯ್ತು | ಆಯಿತು | ತಿಳುವಳಿಕಸ್ತ | ತಿಳುವಳಿಕೆಯುಳ್ಳವನು |
| ಆಗ್ಯೆ, ಆವಾಗ | ಆಗ | ತಿಳುವಳಿಕೆ | ತಿಳಿವಳಿಕೆ, ತಿಳಿವು |
| ಆಗ್ಯೂ | ಆಗಲೂ | ದೇವಾನುದೇವತೆಗಳು, ದೇವಾದಿದೇವತೆಗಳು | ದೇವತೆಗಳು |
| ಆದಾಗ್ಯೂ | ಆದಾಗಿಯೂ, ಆದಾಗಲೂ | | |
| ಆದರೂನು, ಆದರೂನೂವೆ | ಆದರೂ | ದುರ್ನಡತೆ | ಕೆಟ್ಟನಡತೆ |
| ಆ ಕುರಿತು | ಅದನ್ನು ಕುರಿತು | ದೊಡ್ಡತೆ | ದೊಡ್ಡತನ |
| ಆ ಬಗ್ಯೆ | ಆ ಬಗೆಗೆ | ನಮೋನ್ನಮಃ | ನಮೋನಮಃ |
| ಇವತ್ತು | ಈ ಹೊತ್ತು | ಪಾಶ್ಚಿಮಾತ್ಯ | ಪಾಶ್ಚಾತ್ಯ |
| | ಈವೊತ್ತು | ಪೌರ್ವಾತ್ಯ | ಪೌರಸ್ತ್ಯ |
| ಈಗ್ಯೆ, ಈಗ್ಗೆ | ಈಗ | ಪೌರ್ಣಿಮೆ | ಪೂರ್ಣಿಮೆ, ಹುಣ್ಣಿಮೆ |
| ಈ ಬಗ್ಯೆ, ಈ ಬಗ್ಗೆ | ಈ ಬಗೆಗೆ | | |
| ಈವಾಗ | ಈಗ | ಪ್ರಾಧಾನ್ಯತೆ | ಪ್ರಾಧಾನ್ಯ |
| ಉಪಹಾರ | ಉಪಾಹಾರ | ಪ್ರೇರೇಪಿಸು | ಪ್ರೇರಿಸು |
| ಏನಕೆ | ಏಕೆ, ಏತಕ್ಕೆ | ಪ್ರೇರೇಪಣೆ | ಪ್ರೇರಣೆ |
| ಐಕ್ಯತೆ | ಐಕ್ಯ, ಏಕತೆ | ಪುನರ್ರಚನೆ | ಪುನಾರಚನೆ |
| ಔದಾರ್ಯತೆ | ಔದಾರ್ಯ | ಪ್ರಸ್ತಾಪಿಸು | ಪ್ರಸ್ತಾವಿಸು |

| | | | |
|---|---|---|---|
| ಪ್ರಸ್ತಾಪ | ಪ್ರಸ್ತಾವ | ಲೇಖಕಿ | ಲೇಖಿಕೆ,ಲೇಖಕಳು |
| ಫಲಹಾರ | ಫಲಾಹಾರ | ವಿದ್ವತ್ತು | ವಿದ್ವತ್ತೆ, ವಿದ್ವತ್ತ್ವ, ವೈದುಷ್ಯ |
| ಬರುತ್ತೆ | ಬರುತ್ತದೆ | | |
| ಬೆಳುದಿಂಗಳು | ಬೆಳದಿಂಗಳು | ವಿನಹ | ವಿನಾ |
| ಬೇಡಿಕ್ಕೊಳ್ಳು | ಬೇಡಿಕೊಳ್ಳು | ವಿದ್ವಾಂಸಸಮೂಹ | ವಿದ್ವತ್ಸಮೂಹ |
| ಬರೆದುಕ್ಕೊಳ್ಳು | ಬರೆದುಕೊಳ್ಳು | ವಿದ್ವತ್‌ಪೂರ್ಣವಾಗಿ | ವೈದುಷ್ಯಪೂರ್ಣವಾಗಿ |
| ಮನರಂಜನೆ | ಮನೋರಂಜನೆ | | |
| ಮನಮಂಥನ | ಮನೋಮಂಥನ | ವಿದ್ಯುದೀಕರಣ | ವಿದ್ಯುತ್ಕರಣ |
| ಮನೋಶಾಂತಿ | ಮನಃಶಾಂತಿ | ವೈವಿಧ್ಯತೆ | ವೈವಿಧ್ಯ, ವಿವಿಧತೆ |
| ಮನೋಕುಂಠಿತ | ಮನಃಕುಂಠಿತ | ಶಾಕುಂತಲಾ | ಶಕುಂತಲಾ |
| ಮಿಕ್ಕದ | ಮಿಗದ | ಶೋಭಾಯಮಾನ | ಶೋಭಮಾನ |
| ಮಲ್ಲಿಗೆ ಪುಷ್ಪ | ಮಲ್ಲಿಗೆ ಹೂ | ಶ್ರಮೆ | ಶ್ರಮ |
| ಮಾತೋಶ್ರೀ | ಮಾತೃಶ್ರೀ | ಶಿಕ್ಷಣೆ | ಶಿಕ್ಷಣ |
| | | ಸಂಗೀತವಿದೂಷಿ | ಸಂಗೀತವಿದುಷಿ |
| ಮಹದೇಶ್ವರ | ಮಹದೀಶ್ವರ, ಮಹೇಶ್ವರ | ಸಡಿಲಾತಿ | ಸಡಿಲಿಕೆ |
| | | ಸರೋವರ | ಸರಸ್ಸು (ಸರಸ್ಸುಗಳಲ್ಲಿ ಶ್ರೇಷ್ಠವಾದದ್ದು ಸರೋವರ) |
| ಯಶೋಕಾಮನೆ | ಯಶಸ್ಕಾಮನೆ | | |
| ಯಾಕೆ | ಏಕೆ | | |
| ಯೌವ್ವನ | ಯೌವನ | | |
| ರೂಪಸಿ | ರೂಪಿಣಿ, ರೂಪವತಿ | ಹಣಸ್ಥ | ಹಣವಂತ |
| ರೂಪರೇಷೆಗಳು | ರೂಪರೇಖೆಗಳು | ಹೆಗ್ಗುಣ | ಹಿರಿಯಗುಣ |

ಸಂಸ್ಕೃತಶಬ್ದಗಳನ್ನು ಕನ್ನಡದಲ್ಲಿ ಹೊಸದಾಗಿ ಬಳಸುವಾಗ ಸಂಯಮ ಅಗತ್ಯ. ಮೊದಲು ತಜ್ಞರೊಡನೆ ಸಮಾಲೋಚಿಸುವುದು ಉತ್ತಮ. ಒಮ್ಮೆ ಅಪಶಬ್ದಗಳು ಭಾಷೆಯಲ್ಲಿ ಸೇರಿದುವೆಂದರೆ, ರೂಢಮೂಲವಾಗಿ ಕುಳಿತುಬಿಡುತ್ತವೆ. ಉದಾಹರಣೆಗೆ 'ಅಗತ್ಯ' ಶಬ್ದವನ್ನೇ ತೆಗೆದುಕೊಳ್ಳಬಹುದು. ಇದು ಅಪಶಬ್ದವೇ. ಹೀಗೆಯೇ ೧. ಆಧುನೀಕರಣ, ೨. ವೈಭವೀಕರಣ, ೩. ವಿದ್ಯುದೀಕರಣ ಮುಂತಾದ ಶಬ್ದಗಳು ಸೇರುತ್ತಿವೆ. ೪. 'ರಾಷ್ಟ್ರೀಕರಣ'ವಂತೂ ಪ್ರವೇಶಿಸಿ ದೃಢವಾಗಿ ನೆಲೆಯೂರಿದೆ! ಇವುಗಳಲ್ಲಿ ಒಂದನೆಯದು 'ಆಧುನಿಕೀಕರಣ' ಎಂದಿರಬೇಕು. ಎರಡನೆಯದು 'ವೈಭವಕರಣ'ವೆಂದಾಗಬಹುದು. ಮೂರನೆಯದು ' ವಿದ್ಯುತ್ಕರಣ'ವಾಗುವುದು ಉತ್ತಮ. ನಾಲ್ಕನೆಯದನ್ನು 'ರಾಷ್ಟ್ರೀಕರಣ'ವೆಂದೇ ಸಮರ್ಥಿಸಬಹುದು. ಆದರೆ 'ವಿದ್ಯುತ್' ಶಬ್ದಕ್ಕೆ ವಿದ್ಯುತ್ಸಹಿತ ಎಂದೂ 'ರಾಷ್ಟ್ರ' ಶಬ್ದಕ್ಕೆ ರಾಷ್ಟ್ರಾಧೀನ ಎಂದೂ ಲಾಕ್ಷಣಿಕವಾದ ಅರ್ಥವನ್ನಿಟ್ಟುಕೊಳ್ಳಬೇಕಾಗುತ್ತದೆ. 'ರಾಷ್ಟ್ರಸಾತ್ಕರಣ' ಎಂಬುದು ಸರಿಯಾದ ಶಬ್ದ. ಉಚ್ಚಾರಣ ಸೌಕರ್ಯವನ್ನು ಗಮನಿಸಬೇಕಾಗಿರುವುದರಿಂದ, ಯಾವ ಶಬ್ದವನ್ನಾಗಲಿ ಬಳಕೆಗೆ ತರುವ ಮೊದಲು ಸಾವಧಾನವಾಗಿ ಚಿಂತಿಸುವುದು ಒಳ್ಳೆಯದು.

* * *



ಪ್ರಿಯ ಕನ್ನಡ ಬಂಧುಗಳೆ, ೧೯೧೫ರಲ್ಲಿ ಸ್ಥಾಪನೆಗೊಂಡ ಕನ್ನಡ ಸಾಹಿತ್ಯ ಪರಿಷತ್ತು ೯೫ನೇ ವರ್ಷದ ಹೊಸ್ತಿಲಲ್ಲಿದೆ. ಸ್ಥಾಪನೆಗೊಂಡಂದಿನಿಂದ ಇಂದಿನವರೆಗೂ ಕನ್ನಡ-ಕನ್ನಡಿಗ-ಕರ್ನಾಟಕದ ಒಳಿತಿಗೆ ಶ್ರಮಿಸುತ್ತಾ, ಕನ್ನಡಿಗರಲ್ಲಿ ಸಾಹಿತ್ಯ ಮತ್ತು ಸಾಂಸ್ಕೃತಿಕ ಎಚ್ಚರ ಮೂಡಿಸುವಲ್ಲಿ ಪರಿಷತ್ತಿನ ಪ್ರಕಟಣೆಗಳು ಮಹತ್ವದ ಪಾತ್ರ ವಹಿಸುತ್ತಾ ಬಂದಿವೆ. ನಮ್ಮ ಪ್ರಕಟಣೆಗಳು ಓದುಗರ ಜೇಬಿಗೆ ಭಾರವೆನಿಸುವಂಥವಲ್ಲ, ಆದಷ್ಟೂ ಕಡಿಮೆ ಬೆಲೆಯಲ್ಲಿ ಮೌಲಿಕ ಕೃತಿಗಳನ್ನು ಸಹೃದಯರಿಗೆ ಕೊಡಬೇಕೆನ್ನುವ ನೀತಿಗೆ ಪರಿಷತ್ತು ಈಗಲೂ ಬದ್ಧವಾಗಿದೆ. ಕನ್ನಡಿಗರನ್ನು ಪ್ರಜ್ಞಾವಂತರಾಗಿ, ಅಭಿಮಾನಧನರಾಗಿ, ವಿಶ್ವಮಾನವರಾಗಿ ರೂಪಿಸಲು ಪರಿಷತ್ತು ಪ್ರಕಟಿಸುವ ಸಾಹಿತ್ಯವು ಪೂರಕವಾಗಿರಬೇಕೆನ್ನುವ ಆಶಯ ನನ್ನದು.

ಪರಿಷತ್ತು ಈಗಾಗಲೇ ಪ್ರಕಟಿಸಿ ಅತ್ಯಂತ ಜನಪ್ರಿಯವಾಗಿರುವ ಹಾಗೂ ಹೊಸ ಪುಸ್ತಕಗಳನ್ನು ಗದಗದಲ್ಲಿ ನಡೆಯುತ್ತಲಿರುವ ಅಖಿಲ ಭಾರತ ೭೬ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಮುದ್ರಣಗೊಳಿಸಿ ಕನ್ನಡಿಗರ ಕೈಗೊಪ್ಪಿಸುವುದಕ್ಕೆ ನಮಗೆ ಹೆಮ್ಮೆಯೆನಿಸುತ್ತದೆ. ಸಹೃದಯರು ಈ ಪುಸ್ತಕಗಳನ್ನು ಎಂದಿನ ಪ್ರೀತ್ಯಾದರಗಳಿಂದ ಬರಮಾಡಿಕೊಳ್ಳುವರೆಂಬ ಭರವಸೆ ನನಗಿದೆ.

**ಡಾ. ನಲ್ಲೂರು ಪ್ರಸಾದ್. ಆರ್.ಕೆ.**
ಅಧ್ಯಕ್ಷರು
ಕನ್ನಡ ಸಾಹಿತ್ಯ ಪರಿಷತ್ತು



**ಕನ್ನಡ ಸಾಹಿತ್ಯ ಪರಿಷತ್ತು**
ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ
ಬೆಂಗಳೂರು-೫೬೦೦೧೮